ನ್ಯಾಸ
ಮಾಲೆ

೨

# ಶರಣರ ಕಾಯಕ ತತ್ವ

ಎಂ. ಪಿ. ಎಂ. ಶಾಂತವೀರಯ್ಯ




ರ್ಣಾಟಕ ವಿಶ್ವವಿದ್ಯಾಲಯ, ಧಾರವಾಡ
ಜನವರಿ, ೧೯೬೮

ಉಪನ್ಯಾಸ ಗ್ರಂಥಮಾಲೆ

೨೮೨

# ಶರಣರ ಕಾಯಕ ತತ್ವ


ಎಂ. ಪಿ. ಎಂ. ಶಾಂತವೀರಯ್ಯ, ಎಂ.ಎ.






ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಜನವರಿ, ೧೯೭೮

ಪ್ರಕಾಶಕರು :

**ಸಿ. ಎಸ್ ಕಣವಿ**

ನಿರ್ದೇಶಕರು,
ವ್ಯಾಸಂಗವಿಸ್ತರಣ–ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫೦೦೦ ಪ್ರತಿಗಳು
ಜನವರಿ, ೧೯೭೮



ಬೆಲೆ : **೨೫ ಪೈಸೆ**

ಮುದ್ರಕರು :

**ಜಿ. ಬಿ ಮನ್ನಾಚಾರ**

ಸಹಾಯಕ ನಿರ್ದೇಶಕರು,
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ
ಧಾರವಾಡ–೫೮೦ ೦೦೩

# ಅರಿಕೆ

ನಿರುದ್ಯೋಗ ಸಮಸ್ಯೆಯು ತಾಂಡವಾಡುತ್ತಿರುವ ಈ ಸಮಯದಲ್ಲಿ ಅದರ ನಿವಾರಣೆಗೆ ಹನ್ನೆರಡನೆಯ ಶತಮಾನದಲ್ಲಿ ಶ್ರೀ ಬಸವಾದಿ ಪ್ರಮಥರು ಉಪದೇಶಿಸಿ ಆಚರಿಸಿದ ಕಾಯಕ ತತ್ವವು ತಾರಕ ಮಂತ್ರವೆನಿಸಿದೆ. ಕಾಯಕವೆಂದರೆ ಜೀವನವನ್ನು ಪಾವನಗೊಳಿಸುವ ಪರಮೋಚ್ಚ ಸಾಧನ. ಅಲ್ಲಿ ಮೇಲು-ಕೀಳು ಎಂಬುದು ಇಲ್ಲ. ಬಡವ-ಬಲ್ಲಿದ ಎಂಬ ಭೇದವಿಲ್ಲ. ಪಂಡಿತ ಪಾಮರ ಎಂಬ ಭೇದಕ್ಕೆ ಎಡೆಯಿಲ್ಲ. ಅಂತಹ ಉಚ್ಚತಮವಾದ ತತ್ವವನ್ನು ಇಂದಿನ ಮಾನವ ಕುಲಕೋಟಿ ಚಾಚು ತಪ್ಪದೇ ತಮ್ಮ ಜೀವನದಲ್ಲಿ ಅಳವಡಿಸಿಕೊಂಡರೆ ಅದಕ್ಕಿಂತ ಹೆಚ್ಚಿನ ಸುಖ-ಸಂತೋಷ ಬೇರೆ ಏನೂ ಇಲ್ಲ. ಈ ದಿಶೆಯಲ್ಲಿ ಈ ನನ್ನ ಅಲ್ಪ ಪರಿಶ್ರಮ ಮಾನವ ಜನಾಂಗಕ್ಕೆ ಅದರಲ್ಲೂ ವಿದ್ಯಾವಂತ ಯುವಕರಿಗೆ ಪ್ರೇರಕವೆನಿಸಿದರೆ ನನ್ನ ಪರಿಶ್ರಮ ಸಾರ್ಥಕವಾದಂತೆ. ಇದು ನನ್ನ ಪ್ರಪ್ರಥಮ ಉಪನ್ಯಾಸ ಹಾಗೂ ಪುಸ್ತಕವಾದುದರಿಂದ ಸಹೃದಯ ಓದುಗರ ಪ್ರೋತ್ಸಾಹವು ನನಗೆ ಸಂಜೀವಿನಿ. ಅಂತೆಯೇ ವಿಮರ್ಶೆಯನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ.

ತಾರೀಖು ೧೯–೧–೧೯೭೭ರಂದು ಬಳ್ಳಾರಿ ಜಿಲ್ಲೆಯ ಶಿರಗುಪ್ಪ ತಾಲೂಕಿನ ನಾಗರಹಾಳು ಗ್ರಾಮದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣಾ ವಿಭಾಗದವರು ಏರ್ಪಡಿಸಿದ್ದ ಶಿಬಿರದಲ್ಲಿ ನಾನು "ಶರಣರ ಕಾಯಕ ತತ್ವ" ಎಂಬ ವಿಷಯದ ಮೇಲೆ ಮಾತನಾಡಿದ್ದೆ. ಆ ನನ್ನ ಉಪನ್ಯಾಸವೇ ಈ ಚಿಕ್ಕ ಪುಸ್ತಕದ ರೂಪದಲ್ಲಿ ಪ್ರಕಟವಾಗಿದೆ. ಅಂದು ನಾಗರಹಾಳು ಹಾಗೂ ಸುತ್ತು ಮುತ್ತಲಿನ ಗ್ರಾಮಸ್ಥರು ಭಾಷಣ ಕೇಳಿ ಸಂತೋಷಪಟ್ಟು ಮೆಚ್ಚಿಕೆಯ ಮಾತುಗಳನ್ನಾಡಿದುದಕ್ಕಾಗಿ ಅವ

ರೆಲ್ಲರಿಗೂ ನನ್ನ ವಂದನೆಗಳು. ಅಂದು ಆ ಗ್ರಾಮದವರು
ಮಾಡಿದ ಆದರ-ಆತಿಥ್ಯಗಳನ್ನು ಮರೆಯುವಂತಿಲ್ಲ. ನನ್ನ
ಉಪನ್ಯಾಸಕ್ಕೆ ಎಲ್ಲಾ ರೀತಿಯ ಮಾರ್ಗ ದರ್ಶನ ನೀಡಿದ
ಪ್ರೊ. ಅ. ಸಿ. ಹಿರೇಮಠ ರಾಣೇಬೆನ್ನೂರ ಹಾಗೂ ಹಸ್ತಪ್ರತಿ
ತಿದ್ದಿ ಸಲಹೆ ನೀಡಿದ ಎ. ಡಿ. ಬಿ. ಕಾಲೇಜಿನ ಪ್ರಾಚಾರ್ಯರಾದ
ಶ್ರೀ ಪಶುಪತಿ ರೆಡ್ಡಿಯವರಿಗೂ ನನ್ನ ಅಭಿನಂದನೆಗಳು. ಹಸ್ತ
ಪ್ರತಿ ತಯಾರಾಗುವಲ್ಲಿ ಸಹಾಯ ಮಾಡಿದ ನನ್ನ ಸಹೋದರ
ಶ್ರೀ ಬಸಲಿಂಗನಗೌಡ ಹಾಗೂ ಸ್ನೇಹಿತ ಶ್ರೀ ರಾಜಶೇಖರ
ಬಡಿಗಣ್ಣನವರ ಅವರಿಗೂ ನನ್ನ ವಂದನೆಗಳು.

ನನ್ನ ಪೂಜ್ಯ ಗುರುಗಳೂ, ಕುಲಪತಿಗಳೂ ಆದ ಸನ್ಮಾನ್ಯ
ಡಾ. ಆರ್. ಸಿ. ಹಿರೇಮಠ ಅವರಿಗೆ ನನ್ನ ನಮಸ್ಕಾರಗಳನ್ನು
ಈ ಸಮಯದಲ್ಲಿ ಅರ್ಪಿಸುವೆ.

ಈ ಹೊತ್ತಿಗೆ ಪ್ರಕಟವಾಗಲು ಕಾರಣರಾದ ವ್ಯಾಸಂಗ
ವಿಸ್ತರಣ-ಪ್ರಕಟನ ವಿಭಾಗದ ನಿರ್ದೇಶಕರಾದ ಶ್ರೀ ಚೆನ್ನವೀರ
ಕಣವಿ ಅವರಿಗೆ ಮತ್ತು ಸಹಾಯಕ ನಿರ್ದೇಶಕರಾದ ಶ್ರೀ ಎಲ್.
ಎಂ. ಗುಡ್ಡೀನ ರವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.
ಪುಸ್ತಿಕೆಯು ಬೇಗನೆ ಪ್ರಕಟವಾಗುವಂತೆ ನೋಡಿಕೊಂಡ ಉಪ
ನಿರ್ದೇಶಕರಾದ ಶ್ರೀ. ಎಸ್. ಬಿ. ನಾಯಕ ಅವರಿಗೂ ನನ್ನ
ಕೃತಜ್ಞತೆಗಳು.

ಎ.ಡಿ.ಬಿ. ಪ್ರಥಮ ದರ್ಜೆಯ ಎಂ.ಪಿ.ಎಂ. ಶಾಂತವೀರಯ್ಯ
ಕಾಲೇಜು ಹರಪನಹಳ್ಳಿ

# ಪರಿವಿಡಿ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ
ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನ
ಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾ
ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರ
ವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿ
ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿ
ಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು
ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ
ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧ
ಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತ
ವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿ
ಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ
ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ
ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು
ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ
ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು
ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ
ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ
ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋ
ಷದ ಸಂಗತಿಯಾಗಿದೆ.

ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರೆವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೨೮೧ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕ ಗಳು ನಾಲ್ಕು–ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿ ಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

**ಆರ್. ಸಿ. ಹಿರೇಮಠ**
ಕುಲಪತಿಗಳು

# ೧. ಪೀಠಿಕೆ

ಹನ್ನೆರಡನೆಯ ಶತಮಾನ ಕನ್ನಡನಾಡಿನ ಇತಿಹಾಸದ ಸುವರ್ಣ ಪುಟವಾಗಿದೆ. ಈ ಶತಮಾನದಲ್ಲೇ ಮರ್ತ್ಯದ ಮನದ ಮೈಲಿಗೆಯ ಕಳೆಯಲೆಂದು ಜನಿಸಿದ ವಿಶ್ವಧರ್ಮ ದೀಪಕರ ಪಂಕ್ತಿಯಲ್ಲಿ ಕಲ್ಯಾಣದ ಶರಣರ ಹೆಸರುಗಳು ಚಿರಸ್ಮರಣೀಯ ವೆನಿಸಿವೆ. ಶಿವಶರಣರ ಉದಯ ಭುವನದ ಭಾಗ್ಯೋದಯ. ಶರಣರ ಉದಯವಾಗುವುದಕ್ಕೂ ಮುಂಚಿತ ಅಂದರೆ ಹನ್ನೆರಡ ನೆಯ ಶತಮಾನದ ಆದಿಯಲ್ಲಿ ಸಮಾಜದ ಧಾರ್ಮಿಕ ಹಾಗೂ ಸಾಮಾಜಿಕ ಪರಿಸ್ಥಿತಿ ತುಂಬ ಶೋಚನೀಯವಾಗಿತ್ತು. ಧರ್ಮ ಸಂಸ್ಕಾರ ಉಚ್ಚ ವರ್ಣದವರಿಗೆ ಮಾತ್ರ ಮೀಸಲಾಗಿದ್ದಿತು. ನೀಚ ವರ್ಣದವರನ್ನು ಪಶುವಿಗಿಂತ ಕೀಳಾಗಿ ನಡೆಯಿಸಿಕೊಂಡು ಅವರನ್ನು ಧರ್ಮದಿಂದ ವಂಚಿಸಿ ಕೇವಲ ದುಡಿಮೆಯ ಯಂತ್ರ ಗಳಾಗಿ ಮಾಡಿದ್ದರು. ಸ್ತ್ರೀಯರು ಧಾರ್ಮಿಕ ಸಂಸ್ಕಾರದಿಂದ, ಧಾರ್ಮಿಕ ಹಕ್ಕುಗಳಿಂದ ವಂಚಿತರಾಗಿದ್ದರು, ಪೂಜೆಗೆ ಅನರ್ಹ ರಾಗಿದ್ದರು. ಪುರುಷರಿಗಿರುವಷ್ಟು ಸ್ವಾತಂತ್ರ್ಯ ಸ್ತ್ರೀಯರಿಗೆ ಇರಬಾರದೆಂದೂ, ಸ್ತ್ರೀಯು ಪುರುಷನ ಸಿದ್ಧಿಯ ಹಾದಿಯಲ್ಲಿ ಒಂದು ವಿಘ್ನವೆಂದೂ ಜನ ಭಾವಿಸಿದ್ದರು. ಹಳೆಯ ಆದರ್ಶ

ಗಳು ಸತ್ವಹೀನವಾಗಿ, ಲೋಕ ಕಂಗೆಟ್ಟಾಗ, ಪರಿಸರ ಹೊಸತನ್ನು ಕುರಿತು ಚಿಂತಿಸುತ್ತದೆ. ಯುಗಪುರುಷ (ಕಾರಣ ಪುರುಷ)ನನ್ನು ಕೈಮಾಡಿ ಕರೆಯುತ್ತದೆ. ಧರ್ಮದ ಅವನತಿಯಾಗುವ ಸಂದರ್ಭದಲ್ಲಿ ಕನ್ನಡನಾಡಿನ ಜನ ಜೀವನದ ಕತ್ತಲೆಯಲ್ಲಿ ಬೆಳಕು ಮೂಡಿದಂತೆ ಅಸಂಖ್ಯಾತ ಶಿವಶರಣರ ಉದಯವಾಯಿತು. ಶರಣರ ಉದಯ ಇಡೀ ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿಯೇ ಅಪೂರ್ವವಾದದು.

ಇಡೀ ದೇಶವನ್ನೇ ಕಬಳಿಸಿದ್ದ ಧಾರ್ಮಿಕ ಮತ್ತು ಸಾಮಾಜಿಕ ಅಂಧ ಶ್ರದ್ಧೆಯನ್ನು ಹೋಗಲಾಡಿಸಿದ ಕೀರ್ತಿ ಕನ್ನಡನಾಡಿಗೆ ಸಲ್ಲುತ್ತದೆ. ಬಸವಣ್ಣನವರ ನೇತೃತ್ವದಲ್ಲಿ ನಡೆದ ಶರಣರ ವಿಚಾರ ಮಥನದಿಂದ ಸಾಂಸ್ಕೃತಿಕ ಕ್ರಾಂತಿಯು ನವಯುಗಕ್ಕೆ ನಾಂದಿಯಾಯಿತು. ಸಮಾಜದ ಉದ್ಧಾರದ ದೃಷ್ಟಿಯಿಂದ ಈ ಶತಮಾನ ಅದ್ವಿತೀಯವಾದುದು. ಇದು ಕರ್ನಾಟಕಕ್ಕೆ ಮಾತ್ರವಲ್ಲ ಇಡೀ ಭರತಖಂಡದ ಇತಿಹಾಸದಲ್ಲಿಯೇ ಮಹತ್ವಪೂರ್ಣವಾದ ನೂತನ ಅಧ್ಯಾಯವಾಯಿತು. ಬಸವಾದಿ ಪ್ರಮಥರು ಕಲ್ಯಾಣದಲ್ಲಿ ಬೆಳಗಿದ ಮಹಿಮೆಯನ್ನು ಅಲ್ಲಮ ಪ್ರಭು ಸಿದ್ಧರಾಮನಿಗೆ ಹೇಳುವ ಒಂದು ವಚನದಲ್ಲಿ ಮನಗಾಣಬಹುದು.

"ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲವನೆಱೆದು
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ
ಮುಟ್ಟಿಸಲು

ತೊಳಗಿ ಬೆಳಗುತ್ತಿದ್ದಿತ್ತಯ್ಯಾ ಶಿವನ ಪ್ರತಾಪ
ಆ ಬೆಳಗಿನೊಳಗೆ ಒಪ್ಪುತ್ತಿರ್ದರಯ್ಯ ಅಸಂಖ್ಯಾತ
ಭಕ್ತಗಣಂಗಳು
ಶಿವ ಭಕ್ತನಿರ್ದ ಕ್ಷೇತ್ರ ಅವಿಮುಕ್ತಿಯೆಂಬುದು ಹುಸಿಯೆ?
ಶಿವ ಭಕ್ತನಿರ್ದ ದೇಶ ಪಾವನವೆಂಬುದು ಹುಸಿಯೆ ?
ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯರು
ಸಂಗನ ಬಸವಣ್ಣನ ಮಹಿಮೆಯ ನೋಡಾ
ಸಿದ್ಧರಾಮಯ್ಯಾ .

ಕಲ್ಯಾಣದ ಶಿವಶರಣರು ಇಡೀ ನಾಡನ್ನೇ ಭಕ್ತಿಯ ಬೀಡನ್ನಾಗಿ ಪರಿವರ್ತಿಸಿದರು. ಅಧರ್ಮ, ಮೂಢನಂಬಿಕೆ, ಅಂಧ ಸಂಪ್ರದಾಯಗಳ ಸೆಳೆವಿಗೆ ಸಿಕ್ಕಿ ತೊಳಲಾಡುತ್ತಿದ್ದ ಜನತೆಯ ಮನದಲ್ಲಿ ಭಕ್ತಿರಸ ಮೂಡುವಂತೆ ಮಾಡಿದರು. ಅನುಭವ ಮಂಟಪದ ಮೂಲಕ ಬಸವಾದಿ ಪ್ರಮಥರು ಅದ್ಭುತವಾದ ಕ್ರಾಂತಿಯನ್ನೇ ಪ್ರಾರಂಭಿಸಿದರು. ಕ್ರಾಂತಿಯ ಫಲವಾಗಿ ಈ ಕಾಲವನ್ನೂ ವೀರಶೈವ ಧರ್ಮದ ಇತಿಹಾಸದಲ್ಲಿ, ಶಿವಶರಣರ ಕ್ರಾಂತಿಯುಗವೆಂದು ಕರೆಯಬಹುದು. ಈ ಕ್ರಾಂತಿ ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ ತಾತ್ತ್ವಿಕ ಕ್ಷೇತ್ರಗಳನ್ನು ವ್ಯಾಪಿಸಿತು.

ಧಾರ್ಮಿಕ ರಂಗದಲ್ಲಿ ಎಲ್ಲರಿಗೂ ಸಮಾನ ಅವಕಾಶಗಳನ್ನು ಶರಣರು ಕಲ್ಪಿಸಿಕೊಟ್ಟರು. ಸ್ತ್ರೀಯರಿಗೂ ಸ್ವಾತಂತ್ರ್ಯವನ್ನು ಒದಗಿಸಿ ಅವರಿಗೆ ಪುರುಷರಂತೆ ಮೋಕ್ಷವನ್ನು ಪಡೆಯುವ, ದೀಕ್ಷೆಯನ್ನು ಪಡೆಯುವ ಅಧಿಕಾರವಿದೆ ಎಂದು ಹೇಳಿ ಬಸವಣ್ಣ

ಮತ್ತು ಅಲ್ಲಮರ ನೇತೃತ್ವದಲ್ಲಿ ಸ್ಥಾಪಿಸಲ್ಪಟ್ಟ ಅನುಭವ ಮಂಟಪ
ದಲ್ಲಿ ಸ್ತ್ರೀಯರಿಗೂ ಸ್ಥಳಾವಕಾಶ ಮಾಡಿಕೊಟ್ಟರು. ವೇದ
ಕಾಲದಿಂದಬಂದ, "ನ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ" ಎಂಬ ಮಾತನ್ನು
ಹುಸಿ ಮಾಡಿದರು. ಹೆಣ್ಣುಮಾಯೆ ಅಲ್ಲವೆಂಬುದನ್ನು ಅಲ್ಲಮ
ಪ್ರಭು ದೇವರು ಅನುಭವ ಮಂಟಪದ ಅಧ್ಯಕ್ಷ ಪೀಠದಿಂದ,

"ಹೊನ್ನು ಮಾಯೆಯೆಂಬರು, ಹೆಣ್ಣು ಮಾಯೆಯೆಂಬರು,
ಮಣ್ಣು ಮಾಯೆಯೆಂಬರು,
ಹೊನ್ನು ಮಾಯೆಯಲ್ಲ, ಹೆಣ್ಣು ಮಾಯೆಯಲ್ಲ,
ಮಣ್ಣು ಮಾಯೆಯಲ್ಲ,
ಮನದ ಮುಂದಣ ಆಶೆಯೇ ಮಾಯೆ ಕಾಣಾ
ಗುಹೇಶ್ವರಾ"

ಎಂದು ನುಡಿದರು.

ಈ ಮನದ ಮುಂದಣ ಆಶೆಯನ್ನು ಗೆದ್ದವನೇ ಈಶತ್ವವನ್ನು
ಪಡೆಯಬಲ್ಲನೆಂದು ಶರಣರು ಸಾರಿ ಹೇಳಿದರು. ಗಂಡು ಹೆಣ್ಣಿಗೆ
ಭೇದವಿಲ್ಲವೆಂಬುದನ್ನು ದೇವರ ದಾಸಿಮಯ್ಯನ ಈ ಕೆಳಗಿನ
ವಚನ ಪ್ರತಿಪಾದಿಸುತ್ತದೆ.

"ಮೊಲೆ ಮುಡಿ ಬಂದರೆ ಹೆಣ್ಣೆಂಬರು,
ಗಡ್ಡ ಮೀಸೆ ಬಂದರೆ, ಗಂಡೆಂಬರು
ನಡುವೆ ಸುಳಿವಾತ್ಮನು ಗಂಡೂ ಅಲ್ಲ,
ಹೆಣ್ಣೂ ಅಲ್ಲ, ಕಾಣಾ ರಾಮನಾಥಾ".

ದೇವರ ದಾಸಿಮಯ್ಯನ ಈ ವಚನ ಸ್ತ್ರೀ–ಪುರುಷರಿಗೆ ಭೇದ ವಿಲ್ಲ; ಆತ್ಮ ಮಾತ್ರ ಒಂದೇ ಎಂಬುದನ್ನು ಸಿದ್ಧಪಡಿಸುತ್ತದೆ. ಸ್ವತಂತ್ರ ಜೀವನಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದರಿಂದ ಸ್ತ್ರೀಯರು ಎಲ್ಲಾ ರಂಗಗಳಲ್ಲೂ ತಮ್ಮ ವ್ಯಕ್ತಿತ್ವವನ್ನೂ ತೋರಿ ಸಲು ಅನುವಾಯಿತು. ಇದೊಂದು ಸ್ತ್ರೀ ಕುಲದ ಭಾಗ್ಯ ವಿಶೇಷ ವೆನ್ನಬಹುದು. ಅಲ್ಲಿಯುವರೆಗೂ ಸ್ತ್ರೀಯು ಯಾವ ಸ್ವಾತಂತ್ರ್ಯ ವಿಲ್ಲದೆ ನಾಲ್ಕು ಗೋಡೆಗಳ ಮಧ್ಯ ಬಂಧಿತಳಾಗಿದ್ದಳು. ಶರಣರು ಈ ಬಂಧನದಿಂದ ಬಿಡುಗಡೆ ಮಾಡಿದರೂ ಅನೇಕ ಶಿವಶರಣೆ ಯರು ಮಹತ್ವದ ಕಾರ್ಯಗಳನ್ನು ಮಾಡಿ ಅಮರರಾದದ್ದು ಈ ಕಾಲದಲ್ಲಿಯೇ.

ಶಿವಶರಣರು ಸಾಮಾಜಿಕ ರಂಗದಲ್ಲೂ ಕ್ರಾಂತಿಯ ನ್ನುಂಟು ಮಾಡಿರುವದನ್ನು ಕಾಣಬಹುದು. ಜಾತಿಯೆಂಬ ಪೆಡಂಭೂತವನ್ನು ಹೊಡೆದೋಡಿಸಿ, ಆಡಂಬರದ ಆಚಾರಕ್ಕೆ ತಿಲಾಂಜಲಿಯನ್ನಿತ್ತು, ಸಂಪ್ರದಾಯಕಟ್ಟುಗಳನ್ನು ಹರಿದೊಗೆದು ಸಾವಿರಾರು ವರ್ಷಗಳಿಂದ ಬೆಳೆದುಬಂದ ವರ್ಣಾಶ್ರಮ ಧರ್ಮದ ಪ್ರವಾಹದ ಸೆಳೆವಿನಲ್ಲಿ ಸಮಾಜ ಕೊಚ್ಚಿ ಹೋಗುತ್ತಿದ್ದನ್ನು ತಡೆಹಿಡಿದು ಸಮತಾ ತತ್ವದ ಮೇಲೆ ಸಮಾಜವನ್ನು ಕಟ್ಟಲು ಕಲ್ಯಾಣದಲ್ಲಿ ಶರಣರು ವಿಚಾರ ಕ್ರಾಂತಿಯ ಕಹಳೆಯನ್ನು ಊದಿ ದರು. ಈ ಕ್ರಾಂತಿಯ ಕಹಳೆಯ ನಾದಕ್ಕೆ ಜನ ಜಾಗ್ರತಿ ಯಾಯಿತು. ಇದಕ್ಕೂ ಪೂರ್ವದಲ್ಲಿ ಜನತೆ ಸ್ವತಂತ್ರ ವಿಚಾರ ಶಕ್ತಿಯಿಲ್ಲದೆ, ಸಂಪ್ರದಾಯಗಳ ಸೆಳವಿಗೆ ಸಿಕ್ಕು ತೊಳಲಾಡುತ್ತಿತ್ತು. ಜನರ ಮನಸ್ಸು ಸರಿಯಾದ ಧಾರ್ಮಿಕ, ಸಾಮಾಜಿಕ, ವಿಚಾರ

ಗಳಿಲ್ಲದೆ ಜಂಗು ಹಿಡಿದು ಹೋಗಿದ್ದವು. "ಕನ್ನಡಿಗರ ಜಂಗು
ಜೀವನಕ್ಕೆ ಶರಣರು ವಜ್ರಸಾಣೆ ಆಗಿ ಬಂದರು" ಎಂಬ ವಿದ್ವಾಂಸ
ರೊಬ್ಬರ ಮಾತು ಔಚಿತ್ಯಪೂರ್ಣವಾಗಿದೆ. ನಿಜವಾಗಿಯೂ
ಸಮಸ್ತ ಕನ್ನಡಿಗರಿಗೆ ಧರ್ಮ ಜಿಜ್ಞಾಸೆ ಇಲ್ಲದೆ ಮನಸ್ಸು ಕಲುಷಿತ
ಗೊಂಡಿತ್ತು. ಇಂತಹ ಜಂಗನ್ನು ಬಿಡಿಸಲು ಶರಣರು ವಜ್ರಸಾಣೆ
ಆಗಿ ಬಂದದ್ದು ಕನ್ನಡ ನಾಡಿನ ಪುಣ್ಯವೆನ್ನಬಹುದು. ಜನತ
ನೈತಿಕ ಮಟ್ಟವನ್ನು ಕಳೆದುಕೊಂಡು ಹಿಂದಿನವರು ಅನುಸರಿಸಿದ
ಹಾದಿಯಲ್ಲೇ ಕುಂಟುತ್ತಾ ನಡೆದಿದ್ದರು. ಇಂತಹ ಕಗ್ಗತ್ತಲ
ಯಿಂದ ಸಮಾಜವನ್ನು "ತಮಸೋಮಾ ಜ್ಯೋತಿರ್ಗಮಯ"
ಎಂಬ ದಿವ್ಯ ಮಂತ್ರವನ್ನು ಹಾಡಿ ಬೆಳಕಿನತ್ತ ಒಯ್ದರು. ಸಕಲ
ಜೀವಾತ್ಮರಿಗೆ ಲೇಸನ್ನೇ ಬಯಸುವ ಶರಣ ಸಮ್ಮತ ಸಮಾಜ
ರಚನೆಯನ್ನು ನಿರ್ಮಾಣ ಮಾಡಲು ಬಸವಾದಿ ಪ್ರಮಥರು
ತೊಡಗಿದರು.

ಬಸವಣ್ಣನವರು ಧರ್ಮಕ್ಕೊಂದು ನೂತನ ಸ್ವರೂಪ
ಕೊಟ್ಟರು. ಸ್ವತಂತ್ರವಾಗಿ ವಿಚಾರ ಮಾಡಲು ಅಣಿಯಾಗಿ
ಜನತೆಯನ್ನು ಸಹ ಸ್ವತಂತ್ರವಾಗಿ ವಿಚಾರ ಮಾಡಲು ಹಚ್ಚಿದ
ಬಸವಣ್ಣನವರನ್ನು ಕುರಿತು "ಆರ್ಥರ್ ಮೈಲ್ಸ್" ಎನ್ನುವವರು
"Whatever legend may say about Lord Basava, the
fact is fully clear that he was the first Indian free
thinker. He might be called the martin Luther of
India" ಎಂದುಹೇಳಿ ಭಾರತದ ಪ್ರಪ್ರಥಮ ಸ್ವತಂತ್ರ ವಿಚಾರವಾದಿ
ಎಂದು ಕರೆದಿದ್ದಾರೆ. ಇಂತಹ ಸ್ವತಂತ್ರ ವಿಚಾರವಾದಿ ಬಸವಣ್ಣ

ಹಾಗೂ ಉಳಿದ ಶಿವ ಶರಣರಿಗೆ "ವಿಶ್ವವೇ ಕುಟುಂಬ, ಮನುಕುಲದ ಉದ್ಧಾರವೇ ಅವರ ಕಾಯಕವಾಯಿತು". ಇಡೀ ಮಾನವ ಜನಾಂಗ ವೆಲ್ಲಾ ಒಂದು ಕುಟುಂಬ; ಅಲ್ಲಿ ಜಾತಿ ಮತಭೇದಗಳ ಕಲ್ಪನೆ ಇರಬಾರದೆಂಬುದೇ ಶರಣರ ಧ್ಯೇಯವಾಗಿತ್ತು. ಯಾವ ರೀತಿ ನಂದಾ ದೀಪ ತನ್ನ ಮೈ ಸುಟ್ಟುಕೊಂಡು ಇತರರಿಗೆ ಸದಾ ಬೆಳ ಕನ್ನು ನೀಡುತ್ತದೆಯೋ ಹಾಗೆಯೇ ಕಲ್ಯಾಣದ ಶರಣರು ಮಾನವ ಜನಾಂಗದ ಉದ್ಧಾರಕ್ಕಾಗಿ ತಮ್ಮ ದೇಹವನ್ನೇ ಸವೆಸಿ ಅಮರ ರಾಗಿ ಹೋದರು.

ಶಿವಶರಣರು ಪ್ರತಿಪಾದಿಸಿದ ಅನೇಕ ಮಹತ್ವದ ತತ್ವಗಳಲ್ಲಿ "ಕಾಯಕ ತತ್ವ" ವು ಒಂದಾಗಿದೆ. ಈ 'ಕಾಯಕ'ವೆಂಬ ಮಾತೇ ಶರಣರು ವಿಚಾರ ಪ್ರಪಂಚಕ್ಕೆ ಕೊಟ್ಟ ಅತ್ಯಮೌಲ್ಯ ಕಾಣಿಕೆ ಯಾಗಿದೆ. ಇಂತಹ ಕಾಯಕ ತತ್ವ ಕುರಿತು ಶರಣರು ಹೇಳಿದ ವಿಚಾರಗಳನ್ನು ಕೂಲಂಕಷವಾಗಿ ಪರಾಮರ್ಶಿಸಿದಾಗ ಅದರ ಮಹತ್ವದ ಅರಿವು ನಮಗಾಗುವುದರಲ್ಲಿ ಸಂದೇಹವಿಲ್ಲ, ಸಮಾಜ ಸ್ವಯಂಪೂರ್ಣವಾಗಬೇಕಾದರೆ, ಸುಖಮಯವಾಗ ಬೇಕಾದರೆ ಎಲ್ಲರೂ ತಮ್ಮ ತಮ್ಮ ಉದ್ಯೋಗಗಳನ್ನು ಮಾಡಲೇ ಬೇಕು. ಕಾಯಕದ ಮಹತ್ವವನ್ನು ಅರಿಯಬೇಕು ಎಂದು ಶರಣರು ಒತ್ತಿ ಹೇಳಿದರೂ ಶರಣರು ಹೇಳುವ ಕಾಯಕ ವೆಂಬುದು ಕೇವಲ ಉದರಂಭರಣಕ್ಕಾಗಿ ಮಾಡುವ ಉದ್ಯೋಗ ವಲ್ಲ, ಅಥವಾ ಕೇವಲ ಕರ್ತವ್ಯ ಬುದ್ಧಿಯಿಂದ ಮಾಡುವ ನಿಷ್ಕಾಮ ಕರ್ಮವನ್ನೂ ಅಲ್ಲ. ಅದನ್ನೂ ಮೀರಿದಂತಹದ್ದು, ಅದು ಸತ್ಯ ಶುದ್ಧ ದಾಯಕ,

## ೨. ಕಾಯಕದ ಅರ್ಥ

ಈ ಭೂಮಿಯ ಮೇಲೆ ಜನಿಸಿದ ಪ್ರತಿಯೊಬ್ಬ ಮನುಷ್ಯನು ತನ್ನ ಜೀವನೋಪಾಯಕ್ಕಾಗಿ ಒಂದು ಉದ್ಯೋಗ ಕೈಕೊಳ್ಳುತ್ತಾನೆ. ಅದರಿಂದ ಅವನು ತನ್ನ ಆವಶ್ಯಕತೆಗಳನ್ನು ಈಡೇರಿಸಿಕೊಳ್ಳುತ್ತಾನೆ ಸಮಾಜ ಜೀವಿಯಾಗಿ ಬದುಕುವ ಪ್ರತಿಯೊಬ್ಬರಿಗೂ ಒಂದು ಉದ್ಯೋಗ ಬೇಕೇಬೇಕು. ಈ ಉದ್ಯೋಗಕ್ಕೇನೇ ಶರಣರು 'ಕಾಯಕ' ಎಂದು ಕರೆದಿರುವುದು. ಆದರೆ ಶರಣರ ದೃಷ್ಟಿಯಲ್ಲಿ ಕಾಯಕಕ್ಕೆ ಒಂದು ವಿಶಿಷ್ಟವಾದ ಅರ್ಥವಿದೆ. ಯಾವ ಉದ್ಯೋಗವೇ ಆಗಲಿ ಅದು ಕಾಯಕವೆನಿಸುವುದು ಅದನ್ನು ಸ್ವಹಿತ ಮತ್ತು ಪರಹಿತಕ್ಕಾಗಿ ಬಳಸಿಕೊಂಡಾಗ ಮಾತ್ರ. ಸಮಾಜಕ್ಕೆ ಇಲ್ಲವೇ ಒಬ್ಬ ವ್ಯಕ್ತಿಗೆ ಹಾನಿ ಆಗುವಂತಿದ್ದರೆ ಅದು ಕಾಯಕ ವಾಗಲಾರದು. ಉದಾಹರಣೆಗೆ– ಕಳ್ಳನಿಗೆ ಕಳ್ಳತನವೇ ಒಂದು ಉದ್ಯೋಗ, ಸಾಹುಕಾರನಿಗೆ ಸಾಲಕೊಡುವುದೇ ಒಂದು ದಂದೆ. ಆದರೆ ಇದು ಶಿವಶರಣರ ದೃಷ್ಟಿಯಲ್ಲಿ ಕಾಯಕಕ್ಕೆ ಹೊರಗು. ಇಲ್ಲಿ ಸ್ವಹಿತ ಇದೆ. ಹೊರತು ಪರಹಿತ ಇಲ್ಲ. ಅಲ್ಲದೆ ಇದು ಸಮಾಜಕ್ಕೆ ದ್ರೋಹ ಬಗೆಯುವಂತಹದು. ಕಾಯಕದ ಫಲ ತನಗೆ ಮಾತ್ರ ಅಲ್ಲದೆ ಸಮಾಜಕ್ಕೂ ದೊರೆಯಬೇಕು ಎಂಬುದಕ್ಕೆ ಹೆಚ್ಚಿನ ಮಹತ್ವ ಕೊಟ್ಟರು.

ಪ್ರತಿಯೊಬ್ಬ ಮನುಷ್ಯನು ಒಂದಿಲ್ಲೊಂದು ಕಾಯಕ ಕೈಕೊಂಡು ಅದರಲ್ಲೇ ಕೈಲಾಸ ಕಾಣಬೇಕೆಂಬುದನ್ನು ಬಸವಣ್ಣ ನವರು "ಕಾಯಕವೇ ಕೈಲಾಸ"ವೆಂದು ಸಾರಿ ಪ್ರತಿಯೊಬ್ಬರೂ

ಯಾವ ಜಾತಿ ಭೇದವಿಲ್ಲದೆ ಕಾಯಕ ಕೈಕೊಳ್ಳಲು ಹಚ್ಚಿ ಸಮಾಜ ವನ್ನು ಸಮತಾವಾದದ ತಳಹದಿಯ ಮೇಲೆ ಕಟ್ಟಲು ಪ್ರಾರಂಭಿಸಿದರು. ಶರಣರ ದೃಷ್ಟಿಯಲ್ಲಿ ಜಾತಿಯಲ್ಲಿ ಮೇಲು ಕೀಳು ಎಂಬ ಭೇದವೇ ಇಲ್ಲ. "ಮಾನವ ಜಾತಿ ತಾನೊಂದೆವಲಂ" ಎಂದು ಹೇಳಿದ ಕನ್ನಡದ ಆದಿಕವಿ ಪಂಪನಂತೆ ಶರಣರು ಸಹ ಮಾನವ ಜಾತಿ ಒಂದೇ ಎಂದು ಹೇಳಿ 'ಹೊಲಸು ತಿನ್ನುವವನೇ ಹೊಲೆಯ' ಎಂದು ನುಡಿದಿದ್ದನ್ನು ಈ ವಚನದಲ್ಲಿ ಕಾಣಬಹುದು.

> ಕೊಲ್ಲುವವನೇ ಮಾದಿಗ,ಹೊಲಸು ತಿಂಬುವನೇ ಹೊಲೆಯ,
> ಕುಲವೇನೋ ಅವಂದಿರ ಕುಲವೇನೋ,
> ಸಕಲ ಜೀವಾತ್ಮರಿಗೆ ಲೇಸನು ಬಯಸುವ,
> ನಮ್ಮ ಕೂಡಲ ಸಂಗನ ಶರಣರೆಲ್ಲ ಕುಲಜರು.

ಕೂಡಲ ಸಂಗನ ದೃಷ್ಟಿಯಲ್ಲಿ ಕೊಲ್ಲುವವನೇ ಮಾದಿಗ, ಹೊಲಸು ತಿನ್ನುವವನೇ ಹೊಲೆಯ, ಕುಲದಲ್ಲಿ ಅವನು ಶ್ರೇಷ್ಠ ನಾಗಿದ್ದು ಹೊಲಸು ತಿನ್ನುವವನಾಗಿದ್ದರೆ ಅವನು ಶರಣರ ದೃಷ್ಟಿ ಯಲ್ಲಿ ಹೊಲೆಯನೇ ಹೊರತು ಶ್ರೇಷ್ಠನಾಗಲಾರ. ಜಾತಿಭೇದ ವಿಲ್ಲದೆ ಎಲ್ಲರನ್ನು ಕಾಯಕದಲ್ಲಿ ತಲ್ಲೀನರಾಗುವಂತೆ ಮಾಡಿದರು ವ್ಯಕ್ತಿ ಈ ಲೋಕದಲ್ಲಿ ಚೆನ್ನಾಗಿ ಬಾಳಬೇಕಾದರೆ ದುಡಿಮೆಯನ್ನು ಬಿಡದೆ ಅನ್ಯ ಮಾರ್ಗವಿಲ್ಲೆಂದು ಸಾರಿ ಹೇಳಿದರು; 'ದುಡಿಮೆಯೇ ದೈವ ಪೂಜೆ' ಎಂಬ ವೇದ ಕಾಲದ ಮಾತಿನಂತೆ ಶರಣರು ಸಹ ದುಡಿಮೆಯಲ್ಲಿಯೇ ಕೈಲಾಸ ಕಾಣುವ ಮಾರ್ಗವನ್ನು ತೋರಿಸಿ ಕೊಟ್ಟರು. ಧರ್ಮದ ಸಾಧನೆ ಶರೀರದಿಂದಲೇ ಎಂಬುದನ್ನು ಅರುಹಿ. "ಶರೀರ ಮಾದ್ಯಂ ಖಲು ಧರ್ಮ ಸಾಧನಂ" ಎಂಬ ಪುರಾಣದ ಮಾತಿಗೆ ಶರಣರು ಜೀವಕಳೆ ತುಂಬಿದರು. ಧರ್ಮದ

ಸಾಧನೆ ಶರೀರದಿಂದ ಆದಮೇಲೆ, ಶರೀರವನ್ನು ಉಳಿಸಿಕೊಂಡು ಧರ್ಮವನ್ನು ಸಾಧಿಸಿಕೊಂಡು ಸಿದ್ಧಿಯನ್ನು ಪಡೆಯುವುದು ಒಳ್ಳೆಯದು ಎಂಬುದನ್ನು ಸಾಧಿಸಿ ತೋರಿಸಿದರು.

ಬಸವಣ್ಣನವರು ಬಿಜ್ಜಳನ ಬಳಿ ಮಂತ್ರಿಯಾಗಿ ದುಡಿದುದು ಸಂಪತ್ತಿನ ಗಳಿಕೆಗಾಗಿ ಅಲ್ಲ;

> "ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ, ಎನ್ನೊಡಲಿಂಗೆ,
> ಎನ್ನೊಡವೆಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ
> ಎನ್ನ ಮನಕ್ಕೆ ಮನವೇ ಸಾಕ್ಷಿ."

ಎನ್ನುತ್ತಾರೆ ಬಸವಣ್ಣನವರು. ಮಡದಿ ಮಕ್ಕಳಿಗೆಂದು, ಎನ್ನ ಒಡಲಿಗೆಂದು, ಎಂದೂ ನಾನು ದ್ರವ್ಯವನ್ನು ಬಯಸುವುದಿಲ್ಲ. ಅದಕ್ಕೆ ಮನವೇ ಸಾಕ್ಷಿ ಎಂದು ತಾವು ಬಿಜ್ಜಳನ ಬಳಿ ಸೇವಾ ವೃತ್ತಿಯನ್ನು ಕೈಕೊಂಡಿರುವ ಕಾರಣವನ್ನು ಹೀಗೆ ಹೇಳುತ್ತಾರೆ,

> "ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು
> ಓಲೈಸಿಹನೆಂದು ನುಡಿವರಯ್ಯ ಪ್ರಮಥರು,
> ಕೊಡುವೆನುತ್ತರವನವರಿಗೆ ಕೊಡಲಮ್ಮುವೆ,
>
> ಹೊಲೆ ಹೊಲೆಯರ ಮನೆಯ ಹೊಕ್ಕು,
> ಸಲೆ ಕೈ ಕೂಲಿಯ ಮಾಡಿಯಾದರೆಯೂ
> ನಿಮ್ಮ ನಿಲವಿಂಗೆ ಕುದಿವೆನಲ್ಲದೆ
> ಎನ್ನೊಡಲವಸರಕ್ಕೆ ಕುದಿದೆನಾದೊಡೆ
> ತಲೆ ದಂಡ ಕೂಡಲ ಸಂಗಮದೇವಾ".

ಎಂದು ಹೇಳಿ ಜಗತ್ತಿನ ಸಂಸಾರಕ್ಕಾಗಿ ಕುದಿಯುತ್ತಾ ಯಾವ ಉದ್ಯೋಗವನ್ನು ಅವಲಂಬಿಸಿದರೂ ಅದು ಕಾಯಕವಾಗುತ್ತ ದೆಂದು ಸೂಚಿಸುತ್ತಾರೆ. "ಕಾಯಕವೇ ಕೈಲಾಸ" ಎಂದು ನುಡಿದುದು ಈ ಅರ್ಥದಲ್ಲಿ.

## ೩. ಶರಣರ ದೃಷ್ಟಿಯಲ್ಲಿ ಕಾಯಕದ ಸ್ಥಾನಮಾನ

ಶರಣರ ದೃಷ್ಟಿಯಲ್ಲಿ ಕಾಯಕದಲ್ಲಿ ಮೇಲು–ಕೀಳಿಲ್ಲ. ಕೀಳ್ಗೆಲಸ ಮಾಡುವವನು ಕೀಳಲ್ಲ. ಮೇಲ್ಗೆಲಸ ಮಾಡುವವನು ಮೇಲಲ್ಲ. ಮೇಲು–ಕೀಳುಗಳಿಗೆ ಕಾಯಕ ಅಳತೆಗೋಲಲ್ಲ. ಕಾಯಕಕ್ಕಿಂತ ಕಾಯಕದ ಉದ್ದೇಶ ಮುಖ್ಯವೆಂದರು. ಧರ್ಮದ ದೃಷ್ಟಿಯಲ್ಲಿ ಎಲ್ಲ ಕಾಯಕದವರಿಗೂ ಸಮಾನ ಸ್ಥಾನವನ್ನು ಕೊಟ್ಟಿರುವುದನ್ನು ಈ ವಚನದಲ್ಲಿ ಕಾಣಬಹುದು.

"ಸೆಟ್ಟಿಯೆಂಬೆನೆ ಸಿರಿಯಾಳನ ?
ಮಡಿವಾಳನೆಂಬೆನೆ ಮಾಚಯ್ಯನ ?
ಡೋಹಾರನೆಂಬೆನೆ ಕಕ್ಕಯ್ಯನ ?
ಮಾದಾರನೆಂಬೆನೆ ಚನ್ನಯ್ಯನ ?
ಆನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯ !"

ಎನ್ನುತ್ತಾರೆ ಬಸವಣ್ಣನವರು. ಕಾಯಕದಲ್ಲಿ ಹೊಲೆಯು ನಾದ ಭಕ್ತ ಮಾದರ ಚನ್ನಯ್ಯ ತನಗಿಂತ ಹೆಚ್ಚು ಎಂದು ಅವನನ್ನು

ಪುರಸ್ಕರಿಸಿದರು. ಮಾದರ ಚನ್ನಯ್ಯನ ಚಮ್ಮಾವುಗೆಯು ಕಾಯಕ ಕೀಳಲ್ಲ, ಚೋಳರಸನ ರಾಜ ವೈಭವದ ಆರಾಧನೆ ಮೇಲಲ್ಲ. ಎಲ್ಲವೂ ಕಾಯಕದ ದೃಷ್ಟಿಯಲ್ಲಿ ಒಂದೇ ಎಂದು ಸಾರಿದರು. ವೃತ್ತಿ ಭೇದ ಸಮಾಜದಲ್ಲಿ ಇರಕೂಡದೆಂದು, ಇದರಿಂದ ಸಮಾಜದ ಪ್ರಗತಿಗೆ ಅಡ್ಡಿ ಎಂಬುದನ್ನು ಮನಗಂಡು ವೃತ್ತಿ ಭೇದ ಅಳಿಸಲು ಪ್ರಯತ್ನ ಪಟ್ಟರು. ಸಮಾಜ ಸ್ವಯಂ ಪೂರ್ಣವಾಗಬೇಕಾದರೆ ಎಲ್ಲರೂ ತಮ್ಮ ತಮ್ಮ ಉದ್ಯೋಗವನ್ನು ಯಾವ ವೃತ್ತಿ ಭೇದ ವಿಲ್ಲದೆ ಮಾಡಬೇಕೆಂದು, ಇದರಿಂದ ಸಮಾಜದ ಸರ್ವಾಂಗೀಣ ಪ್ರಗತಿ ಸಾಧ್ಯವೆಂದು ಶರಣರು ಎಲ್ಲರಿಗೂ ತಿಳಿಯಪಡಿಸಿದರು.

ಬಸವಾದಿ ಶಿವಶರಣರ ಕಾಲಕ್ಕೆ ಬೇಡುವವರೇ ಇರಲಿಲ್ಲ ವೆನ್ನುವುದಕ್ಕೆ ಅಣ್ಣನವರ ಮಹಾಮನೆಯಲ್ಲಿ ಬರೆಸಿದ, "ಬೇಡುವವರಿಲ್ಲದೆ ಬಡವನಾದೆನಯ್ಯ" ಎಂಬ ಒಂದೇ ಮಾತು ಸಾಕು. ಅಂದು ನೀಡುವವರಿದ್ದು ಬೇಡುವವರಿದ್ದಿಲ್ಲ ಅಂದಾಗ ಪ್ರತಿಯೊಬ್ಬರು ಸ್ವಾವಲಂಬಿಗಳಾಗಿ ಜೀವಿಸುತ್ತಿದ್ದರೆನ್ನಬಹುದು. ಶರಣರು ತಮ್ಮ ವಚನಗಳ ಮೂಲಕ ಜನರಲ್ಲಿ ನವ ಚೈತನ್ಯ ಉಂಟಾಗುವಂತೆ ಮಾಡಿ ಎಂತಹ ಸೋಮಾರಿಯನ್ನು ಸಹ ಕಾಯಕದಲ್ಲಿ ತೊಡಗಿಸಿದ್ದು ಶರಣರು ಎಸೆಗಿದ ಪವಾಡವೆನ್ನ ಬಹುದು. "ಅನ್ಯರ ಮನೆಗೆ ಹೋಗಿ ತನ್ನುದರವ ಹೊರೆಯದ ಅಚ್ಚ ಶರಣರ ಕಂಡರೆ ನಿಶ್ಚಯವಾಗಿ ಕೂಡಲ ಸಂಗಯ್ಯನೆಂಬೆ" ಎನ್ನುತ್ತಾರೆ ಬಸವಣ್ಣನವರು. "ಬೇರೆಯವರ ಮನೆಗೆ ಹೋಗಿ ತನ್ನ ಹೊಟ್ಟೆಯ ಹೊರೆಯನ್ನು ಹಿಂಗಿಸಿಕೊಂಡರೆ ಅವನು ಶರಣ ನಲ್ಲ". ಕಂದಿಸಿ, ಕುಂದಿಸಿ, ನೋಯಿಸಿ, ಕಂಡ ಕಂಡವರ ಬೇಡಿ ತಂದು ಮಾಡಿಹೆನೆಂಬುದು ಮುಂದುಗದೋಗರ ಅದು ಲಿಂಗ

ನೈವೇದ್ಯಕ್ಕೆ ಸಲ್ಲದು". ಗುರುವಾದೊಡು ಕಾಯಕ ಮಾಡಬೇಕು ಎಂದಿದ್ದಾರೆ. ಅದರಂತೆಯೇ ಅಂದಿನ ಕಾಲಕ್ಕೆ ಗುರುಜಂಗಮರು ಮಠಗಳಲ್ಲಿ ಶಿಕ್ಷಣ ಪ್ರಸಾರವನ್ನು ನಿಷ್ಠೆಯಿಂದ ಮಾಡುತ್ತಿದ್ದರು. ಶರಣರು ಭಿಕ್ಷೆಯನ್ನು ಕಟುವಾಗಿ ಖಂಡಿಸಿದ್ದರೂ ಇಂತಹ ಜಂಗಮರಿಗೆ ಅವಕಾಶವಿತ್ತು. ಕಾರಣ ಇವರ ಶಿಕ್ಷಣ ಪ್ರಸಾರದ ಕಾಯಕಕ್ಕೆ ಬೇರೆ ಪ್ರತಿಫಲ ದೊರೆಯದೆ ಇರುವುದರಿಂದ ಜೋಳಿಗೆ ಅವಲಂಬಿಸಬೇಕಾದ ಪರಿಸ್ಥಿತಿ ಬರುತ್ತಿತ್ತು. ಜಂಗಮರು ಸ್ವಾಮಿಗಳು ಜೋಳಿಗೆ ಹಾಕಿಕೊಂಡು ಊರಲ್ಲಿ ಕೋರುಧಾನ್ಯ ಭಿಕ್ಷೆಗೆ ಹೋಗುತ್ತಿದ್ದರು. ಅಂದರೆ ಅವರು ಕೋರಿದ ಧಾನ್ಯ ವನ್ನು ಜನರು ನೀಡುತ್ತಿದ್ದರು. ಆದರಿಂದ ಅವರ ಜೀವನ ಸಾಗುತ್ತಿತ್ತು.

ವಚನಕಾರರು ಕಾಯಕಕ್ಕೆ ಎಷ್ಟು ದೊಡ್ಡ ಸ್ಥಾನವನ್ನು ಕೊಟ್ಟಿದ್ದರೆಂಬುದನ್ನು ಅವರ ಮಾತುಗಳಿಂದಲೇ ಅರಿಯಬೇಕು.

> "ಗುರುವಾದಡೂ ಕಾಯಕದಿಂದಲೆ ಜೀವನ್ಮುಕ್ತಿ
> ಲಿಂಗವಾದಡೂ ಕಾಯಕದಿಂದಲೆ ಶಿಲೆಯ ಕುಲ ಹರಿವುದು,
> ಜಂಗಮವಾದಡೂ ಕಾಯಕದಿಂದಲೆ ವೇಷದ ಪಾಶ
> ಹರಿವುದು,
> ಇದು ಚೆನ್ನಬಸವಣ್ಣ ಪ್ರಿಯ ಚಂದೇಶ್ವರ
> ಲಿಂಗದ ಅರಿವು".

ಎನ್ನುತ್ತಾನೆ ನುಲಿಯ ಚಂದಯ್ಯ, ಈತ ಹಗ್ಗ ಹೊಸೆ ಯುವ ಕಾಯಕ ಕೈಕೊಂಡಿದ್ದರೂ ಅದರಲ್ಲೇ ಕೈಲಾಸ ಕಂಡು ಕೊಂಡವ. ವೀರಶೈವ ಧರ್ಮದ ಪ್ರಕಾರ ಗುರು–ಲಿಂಗ–ಜಂಗ

ಮಕ್ಕೆ ಹೆಚ್ಚಿನ ಸ್ಥಾನವಿದೆ. ಇಂತಹ ಗುರು–ಲಿಂಗ–ಜಂಗಮ
ವಾದರೂ ಕಾಯಕದಿಂದಲೂ ಜೀವನ್ಮುಕ್ತಿ ಎಂದು ಸಾರ
ಬೇಕಾದರೆ ದೇವರಿಗಿಂತ ಹೆಚ್ಚಿನ ಸ್ಥಾನವನ್ನು ಕಾಯಕಕ್ಕೆ ಶಿವ
ಶರಣರು ಕಲ್ಪಿಸಿಕೊಟ್ಟರು. ಕಾಯಕವನ್ನು ಕೈಕೊಂಡಾಗ ಯಾರ
ಹಂಗು ಇರಬಾರದು ಎಂಬುದನ್ನು ಈ ವಚನದಲ್ಲಿ ಕಾಣಬಹುದು.

> "ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದೊಡೂ
> ಮರೆಯಬೇಕು, ಲಿಂಗಪೂಜೆಯಾದಡೂ ಮರೆಯಬೇಕು
> ಜಂಗಮ ಮುಂದಿದ್ದಡೂ ಹಂಗು ಹರಿಯಬೇಕು
> ಕಾಯಕವೇ ಕೈಲಾಸವಾದ ಕಾರಣ, ಅಮರೇಶ್ವರ
> ಲಿಂಗವಾಯಿತ್ತಾದಡೂ ಕಾಯಕದೊಳಗು".

ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದರೂ ಮರೆಯ
ಬೇಕು. ಎಂದು ಘಂಟಾಘೋಷವಾಗಿ ಸಾರ ಬೇಕಾದರೆ
'ನಗುರೋರಧಿಕಂ' ಎಂದರೆ ಗುರುವಿನಕ್ಕಿಂತಲೂ ಹೆಚ್ಚಿನದೇನು
ಇಲ್ಲವೆಂಬ ಶ್ರುತಿ ವಾಕ್ಯದ ಅನುಭವಕ್ಕಿಂತಲೂ ಶಿವಶರಣರ ಅನು
ಭವದಲ್ಲಿ ಕಾಯಕವೇ ಮಿಗಿಲಾದುದು ಎಂಬುದನ್ನು ನುಲಿಯ
ಚಂದಯ್ಯನಂಥ ಶರಣರ ಜೀವನದಿಂದ ಮನಗಾಣಬಹುದು.

ಕೈಕೊಂಡ ಕಾಯಕದಲ್ಲಿ ಫಲಾಪೇಕ್ಷೆ ಇರಕೂಡದು. ಫಲಾ
ಪೇಕ್ಷೆ ಇಲ್ಲದೆ ಕಾಯಕದಲ್ಲಿ ಲೀನವಾಗಬೇಕೆಂದರು. "ಅಮೃತಕ್ಕೆ
ಹಸಿವುಂಟೇ ? ಜಲಕ್ಕೆ ತೃಷೆಯುಂಟೇ ? ಸತ್ಯ ಶುದ್ಧ ಕಾಯಕ
ವಂತನಿಗೆ ಮುಕ್ತಿಯ ಬಯಕೆಯುಂಟೇ ?" ಎಂದು ಹೇಳುವಲ್ಲಿ
ಕಾಯಕದಲ್ಲೇ ಕೈಲಾಸ ಕಾಣುತ್ತಾನೆ ಎಂಬುದನ್ನು ಜಗಜ್ಜಾಹಿರ
ಪಡಿಸಿದರು. ಅಂತೆಯೇ ಎಲ್ಲರೂ ತಮ್ಮ ತಮ್ಮ ಕಾಯಕದಲ್ಲಿ

ತೊಡಗಿ ಅಂದಿನ ಭೂಲೋಕವನ್ನೇ ಕೈಲಾಸವನ್ನಾಗಿ ಮಾಡಲ ಯತ್ನಿಸಿದರು.

ಶರಣರು ಕಾಯಕವೇ ಕೈಲಾಸವೆಂದು ನಡೆದು, ನುಡಿದು ಪರಲೋಕದ ಚಿಂತೆಯಲ್ಲಿಯೇ ಇದ್ದು ಮುಕ್ತಿಗಾಗಿಯೇ ಜೀವಿಸಿ ಇಹಲೋಕವನ್ನು ಮರೆತ ಅಳಿಮನದ ಮಾನವರ ಕಣ್ಣು ತೆರೆಯಿಸಿ ದರು. ಸಾವಿಗಾಗಿ ಅಂಜಿ ತಮ್ಮ ತಮ್ಮ ಕರ್ತವ್ಯಗಳನ್ನು ಮರೆತ ಮಾನವರನ್ನು ಎಚ್ಚರಿಸಿದರು ಶರಣರು.

"ನಾಳೆ ಬಪ್ಪದು ನಮಗಿಂದೇ ಬರಲಿ,
ಇಂದು ಬಪ್ಪದು ನಮಗೀಗಲೆ ಬರಲಿ !
ಇದಕಾರಂಜುವರು ? ಇದಕಾರಳುಕುವರು ?
ಜಾತಸ್ಯ ಮರಣಂ ಧ್ರುವಂ" ಎಂಬುದಾಗಿ,
ನಮ್ಮ ಕೂಡಲ ಸಂಗಮದೇವರು ಬರೆದ ಬರೆಹವ
ತಪ್ಪಿಸುವಡೆ
ಹರಿ ಬ್ರಹ್ಮಾದಿಗಳಿಗಳವಲ್ಲ !

ಎಂದು ಕಾಯಕ ಭೋಗಿಗೆ 'ಮರಣವೇ ಮಹಾನವಮಿ' ಎಂಬ ವೀರವಾಣಿಯನ್ನು ಸಾರಿ ಜನರಲ್ಲಿ ಇದ್ದ ಮರಣದ ಭೀತಿಯನ್ನು ಕಿತ್ತಿ ಹಾಕಿ ಇರುವಷ್ಟು ದಿನ ನಿಷ್ಠೆಯಿಂದ ಕಾಯಕವಂತರಾಗಿ ಬಾಳುವ ಬಾಳಿನ ಹದವನ್ನು ತಿಳಿಸಿದರು. ಬಹುದಿವಸ ಬಾಳಿ ವ್ಯರ್ಥ ಜೀವನ ಸಾಗಿಸುವುದಕ್ಕಿಂತ ಅಲ್ಪಕಾಲ ಬಾಳಿದರೂ ಸರ್ವರಿಗೂ ಲೇಸನ್ನೇ ಬಯಸುವ ಬದುಕು ಸಾಗಿಸಬೇಕೆಂಬುದೇ ಶರಣರ ಜೀವನಾದರ್ಶವಾಗಿತ್ತು. ಬಹಳ ದಿನ ಬದುಕುವುದೇ ಭಾಗ್ಯವಲ್ಲ. ಸ್ವಲ್ಪ ದಿನ ಬದುಕಿದರೂ 'ಸೈ' ಎನಿಸಿಕೊಂಡು

ಬದುಕಬೇಕು. ಈ ಭೂಮಿಗೆ ಬರುವಾಗ ನಾವೇನೂ ತರಲಿಲ್ಲ. ಹೋಗುವಾಗ ಯಾರೇನೂ ತೆಗೆದುಕೊಂಡು ಹೋಗುವುದಿಲ್ಲ. ಅಂದಬಳಿಕ ಪ್ರತಿಯೊಬ್ಬ ವ್ಯಕ್ತಿ ಒಳ್ಳೆಯ ಬಾಳನ್ನು ಸಾಗಿಸಬೇಕು. ಈ ಇಹಲೋಕದ ಯಾತ್ರೆಯನ್ನು ಮುಗಿಸಿಕೊಂಡು ಹೊರಟಾಗ ನಮ್ಮ ಹಿಂದೆ ಏನೂ ಬರುವುದಿಲ್ಲ. ಬರುವವು ಕೇವಲ ಎರಡು ವಸ್ತುಗಳು, "ಧರ್ಮ ಕೀರ್ತಿ ದ್ವಯಂ ಸ್ಥಿರಂ" ಎನ್ನುವಂತೆ ಧರ್ಮ ಮತ್ತು ಕೀರ್ತಿ ಇವೆರಡೇ ನಮ್ಮ ಬೆನ್ನ ಹಿಂದೆ ಬರುವವು. ಅಂದ ಬಳಿಕ ಪ್ರತಿಯೊಬ್ಬರು ಇರುವಷ್ಟು ದಿನ ಶರಣರು ಹೇಳುವ ರೀತಿ ಯಲ್ಲಿ 'ಸೈ' ಎನಿಸಿಕೊಳ್ಳುವ ಜೀವನ ಸಾಗಿಸಬೇಕೇ ಹೊರತು ಹಾವು, ಹದ್ದು ಕಾಗೆಗಳಂತೆ ಬದುಕು ಸಾಗಿಸಬಾರದು.

"ಹಾವು ಹದ್ದು, ಕಾಗೆ ಅನಂತ ಕಾಲ ಬದುಕವೆ ?
ಬೇಡವೋ ಮಾನವಾ, ಲೇಸೆನಿಸಿಕೊಂಡು ಬದುಕೋ.
ಮಾನವ !
ಲೇಸೆನಿಸಿಕೊಂಡು ಐದು ದಿನ ಬದುಕಿದರೇನು ?
ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೇನು ?

ಹಲವರಿಗೆ ಹೊರೆಯಾಗದೆ, ಕೆಲವರಿಗಾದರೂ ನೇರವಾಗಿ ಬದುಕ ಬೇಕು. ಆಗ ಬಾಳಿಗೂ ಬೆಲೆ, ಬದುಕವವರಿಗೂ ಬೆಲೆ. ಹೀಗೆ ತಾವೂ ಬದುಕಿ ಅದರಂತೆ ನಮಗೂ ಬದುಕುವ ದಾರಿ ತೋರಿ ಹೋಗಿದ್ದಾರೆ ಶರಣರು.

ಕಾಯಕವಂತನಾಗಿ ಜೀವನ ಸಾಗಿಸುವಾಗ ಗರ್ವ ಸಲ್ಲದು, ತಾ ಮಾಡುವೆನೆಂಬ ಹಮ್ಮು ಇರಕೂಡದು.

"ಮಾಡಿದನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ". ಕಾರಣ ನಾ ಮಾಡಿದೆನೆಂಬುದು ಮನದಲ್ಲೂ ಕೂಡ ಹೊಳೆಯಬಾರದೆಂದು ಏನೇ ಕಾಯಕ ಮಾಡಿದರೂ ಅದು ನಿಷ್ಠೆಯಿಂದ ಕೂಡಿರಬೇಕು ಎಂದು ಶರಣರು ಹೇಳಿದು ದನ್ನು ಈ ವಚನದಿಂದರಿಯಬಹುದು.

> "ಸತ್ಯ ಶುದ್ಧಕಾಯಕದಿಂದ ಬಂದ ದ್ರವ್ಯದಲ್ಲಿ ಚಿತ್ತ ವಿಚ್ಛಂದವಾಗದಿರಬೇಕು. ನೇಮದ ಕೂಲಿಯುಂದಿನ ನಿತ್ಯನೇಮದಲ್ಲಿ ಸಂದಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯಾ !"

ಹೇಮದಾಸೆಗೆ ಮನಸ್ಸು ಮಾಡಿದರೆ ದೇವರು ಮೆಚ್ಚನು. ನೇಮ ದಿಂದ ಮಾಡುವ ಕೂಲಿ ನಿತ್ಯ ನೇಮದಲ್ಲಿ ಸಂದಿರಬೇಕು. ಎಂದು ನುಡಿದ ಶರಣರು ಕಾಯಕದಲ್ಲಿ ನೀತಿಗೆ ಮುಖ್ಯ ಸ್ಥಾನವನ್ನು ಕೊಟ್ಟರು. ಪ್ರಾಮಾಣಿಕತೆ ಇಲ್ಲದ್ದು ಕಾಯಕವಾಗಲಾರದು. ಸತ್ಯ ಶುದ್ಧ ಕಾಯಕವಂತ "ಧನದಲ್ಲಿ ಶುಚಿ ಪುಣ್ಯದಲ್ಲಿ ನಿರ್ಭ ಯನು". "ನಿಧಾನ ತಪ್ಪಿ ಬಂದರೆ ಆತ ಬಲ್ಲನು, ಊರ ಮುಂದೆ ಹಾಲಹಳ್ಳ ಹರಿಯುತ್ತಿರಲು ಅವನು ಅದನ್ನು ಮುಟ್ಟ, ಏಕೆಂದರೆ ಅದು ಕಾಯಕದಿಂದ ಬಂದುದಲ್ಲ, ಕಾಯಕದಿಂದ ಬಂದ ದ್ರವ್ಯ ಮಾತ್ರ ದೇವರಿಗೆ ಸಲ್ಲುತ್ತದೆ ಹೊರತು ಪಾಪಿಯ ಧನವಲ್ಲ ವೆಂಬುದನ್ನು ಈ ವಚನದಲ್ಲಿ ತಿಳಿಸಿದ್ದಾರೆ.

> "ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ ಪಾತ್ರಕ್ಕೆ
> ಸಲ್ಲದಯ್ಯಾ !

ಬದುಕಬೇಕು. ಈ ಭೂಮಿಗೆ ಬರುವಾಗ ನಾವೇನೂ ತರಲಿಲ್ಲ. ಹೋಗುವಾಗ ಯಾರೇನೂ ತೆಗೆದುಕೊಂಡು ಹೋಗುವುದಿಲ್ಲ. ಅಂದಬಳಿಕ ಪ್ರತಿಯೊಬ್ಬ ವ್ಯಕ್ತಿ ಒಳ್ಳೆಯ ಬಾಳನ್ನು ಸಾಗಿಸಬೇಕು. ಈ ಇಹಲೋಕದ ಯಾತ್ರೆಯನ್ನು ಮುಗಿಸಿಕೊಂಡು ಹೊರಟಾಗ ನಮ್ಮ ಹಿಂದೆ ಏನೂ ಬರುವುದಿಲ್ಲ. ಬರುವವು ಕೇವಲ ಎರಡು ವಸ್ತುಗಳು, "ಧರ್ಮ ಕೀರ್ತಿ ದ್ವಯಂ ಸ್ಥಿರಂ" ಎನ್ನುವಂತೆ ಧರ್ಮ ಮತ್ತು ಕೀರ್ತಿ ಇವೆರಡೇ ನಮ್ಮ ಬೆನ್ನ ಹಿಂದೆ ಬರುವವು. ಅಂದ ಬಳಿಕ ಪ್ರತಿಯೊಬ್ಬರು ಇರುವಷ್ಟು ದಿನ ಶರಣರು ಹೇಳುವ ರೀತಿ ಯಲ್ಲಿ 'ಸೈ' ಎನಿಸಿಕೊಳ್ಳುವ ಜೀವನ ಸಾಗಿಸಬೇಕೇ ಹೊರತು ಹಾವು, ಹದ್ದು ಕಾಗೆಗಳಂತೆ ಬದುಕು ಸಾಗಿಸಬಾರದು.

> "ಹಾವು ಹದ್ದು, ಕಾಗೆ ಅನಂತ ಕಾಲ ಬದುಕವೆ ?
> ಬೇಡವೋ ಮಾನವಾ, ಲೇಸೆನಿಸಿಕೊಂಡು ಬದುಕೋ.
> ಮಾನವ !
> ಲೇಸೆನಿಸಿಕೊಂಡು ಐದು ದಿನ ಬದುಕಿದರೇನು ?
> ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೇನು ?

ಹಲವರಿಗೆ ಹೊರೆಯಾಗದೆ, ಕೆಲವರಿಗಾದರೂ ನೇರವಾಗಿ ಬದುಕ ಬೇಕು. ಆಗ ಬಾಳಿಗೂ ಬೆಲೆ, ಬದುಕವವರಿಗೂ ಬೆಲೆ. ಹೀಗೆ ತಾವೂ ಬದುಕಿ ಅದರಂತೆ ನಮಗೂ ಬದುಕುವ ದಾರಿ ತೋರಿ ಹೋಗಿದ್ದಾರೆ ಶರಣರು.

ಕಾಯಕವಂತನಾಗಿ ಜೀವನ ಸಾಗಿಸುವಾಗ ಗರ್ವ ಸಲ್ಲದು. ತಾ ಮಾಡುವೆನೆಂಬ ಹಮ್ಮು ಇರಕೂಡದು.

"ಮಾಡಿದನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ". ಕಾರಣ ನಾ ಮಾಡಿದೆನೆಂಬುದು ಮನದಲ್ಲೂ ಕೂಡ ಹೊಳೆಯಬಾರದೆಂದು ಏನೇ ಕಾಯಕ ಮಾಡಿದರೂ ಅದು ನಿಷ್ಠೆಯಿಂದ ಕೂಡಿರಬೇಕು ಎಂದು ಶರಣರು ಹೇಳಿದು ದನ್ನು ಈ ವಚನದಿಂದರಿಯಬಹುದು.

> "ಸತ್ಯ ಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ ಚಿತ್ತ ವಿಚ್ಛಂದವಾಗದಿರಬೇಕು. ನೇಮದ ಕೂಲಿಯಿಂದಿನ ನಿತ್ಯನೇಮದಲ್ಲಿ ಸಂದಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯಾ !"

ಹೇಮದಾಸೆಗೆ ಮನಸ್ಸು ಮಾಡಿದರೆ ದೇವರು ಮೆಚ್ಚನು. ನೇಮ ದಿಂದ ಮಾಡುವ ಕೂಲಿ ನಿತ್ಯ ನೇಮದಲ್ಲಿ ಸಂದಿರಬೇಕು. ಎಂದು ನುಡಿದ ಶರಣರು ಕಾಯಕದಲ್ಲಿ ನೀತಿಗೆ ಮುಖ್ಯ ಸ್ಥಾನವನ್ನು ಕೊಟ್ಟರು. ಪ್ರಾಮಾಣಿಕತೆ ಇಲ್ಲದ್ದು ಕಾಯಕವಾಗಲಾರದು. ಸತ್ಯ ಶುದ್ಧ ಕಾಯಕವಂತ "ಧನದಲ್ಲಿ ಶುಚಿ ಪುಣ್ಯದಲ್ಲಿ ನಿರ್ಭ ಯನು". "ನಿಧಾನ ತಪ್ಪಿ ಬಂದರೆ ಆತ ಬಲ್ಲನು, ಊರ ಮುಂದೆ ಹಾಲಹಳ್ಳ ಹರಿಯುತ್ತಿರಲು ಅವನು ಅದನ್ನು ಮುಟ್ಟ, ಏಕೆಂದರೆ ಅದು ಕಾಯಕದಿಂದ ಬಂದುದಲ್ಲ, ಕಾಯಕದಿಂದ ಬಂದ ದ್ರವ್ಯ ಮಾತ್ರ ದೇವರಿಗೆ ಸಲ್ಲುತ್ತದೆ ಹೊರತು ಪಾಪಿಯ ಧನವಲ್ಲ ವೆಂಬುದನ್ನು ಈ ವಚನದಲ್ಲಿ ತಿಳಿಸಿದ್ದಾರೆ.

> "ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ ಪಾತ್ರಕ್ಕೆ
> ಸಲ್ಲದಯ್ಯಾ !

ನಾಯಿಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ
ಸಲ್ಲದಯ್ಯಾ !
ನಮ್ಮ ಕೂಡಲ ಸಂಗನ ಶರಣರಿಗಲ್ಲದೆ ಮಾಡುವ ಅರ್ಥ
ವ್ಯರ್ಥ ಕಂಡಯ್ಯಾ !

ಕಾಯಕದಿಂದ ಬಂದ ಹಣ ಗುರು–ಲಿಂಗ–ಜಂಗಮಕ್ಕೆ ಸಲ್ಲುವಂತಿರಬೇಕು. ಕಾಯಕ ಮಾಡುವುದು ಹೇಮದಾಸೆಗಾಗಿ ಅಲ್ಲ ಮತ್ತು ಹೆಚ್ಚಿನ ಗಳಿಕೆಗಾಗಿಯೂ ಅಲ್ಲ. ಗಳಿಕೆ ಲೋಭಿಯ ಗುಣ. ಇಂದಿಂಗೆ ನಾಳಿಂಗೆ ಎಂದು ಕೂಡಿ ಇಡುವವ ಭಕ್ತನೇ ಅಲ್ಲ. ಭಕ್ತನಿಗೆ ಆಶೆ ಎಂಬುದೇ ಇರಬಾರದು. ಅಂದಿನದು ಅಂದಿಂಗೆ ಆದರೆ ಸಾಕು ಎಂಬ ಮನೋಭಾವನೆ ಇರಬೇಕು. ಆಶೆಯೆಂಬುದು ಯಾರಿಗಿರುತ್ತದೆ ಎಂಬುದನ್ನು ಈ ಕೆಳಗಿನ ವಚನದಲ್ಲಿ ಮನಗಾಣಬಹುದು.

"ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯ?
ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ
ಅಯ್ಯ ? ಈಸಕ್ಕೆಯಾಸೆ ನಿಮಗೇಕೆ ? ಈಶ್ವರನೊಪ್ಪ !
ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ದೂರ
ಮಾರಯ್ಯ !"

ಎನ್ನುವಲ್ಲಿ ಆಶೆ ಎಂಬುದು ಶಿವ ಭಕ್ತರಾದವರಿಗೆ ಇರಬಾರದು. ಈ ಆಶೆಯೇ ನಿರಾಶೆಗೆ ಕಾರಣವಾಗುತ್ತದೆ. ಕಾರಣ ಆಶೆಯನ್ನು ತೊರೆದಾಗ ನಿಜವಾದ ಭಕ್ತನಾಗುತ್ತಾನೆ.

"ಆಶೆಯುಳಿದು ನಿರಾಶೆಯಲ್ಲಿ ನಿಂದು, ವೇಷವ ಜರಿದು,
ಸರ್ವವು ಮರೆದು, ಈ ಗುಣತ್ರಯುವಂ ತೊರೆದು

ನಿರಾಶೆಯ ಮೇಲೆ ನಿಂದರೆ ಅದೇ ಶರಣಂಗೆ ಸರಿ ಎಂಬೆ
ಬಸವ ಪ್ರಿಯ ಕೂಡಲ ಚೆನ್ನಬಸವಣ್ಣ ".

ಆಶೆ ಅಳಿದು ನಿರಾಶೆಯಲ್ಲಿ ನಿಂದು ಭಕ್ತಿ ಜೀವನವನ್ನು ಸಾಗಿಸು ವವರನ್ನು ಶರಣರು ಮನವಾರೆ ಮೆಚ್ಚಿದರು. ಸತ್ಯಶುದ್ಧ ಕಾಯಕದಿಂದ ಬಂದ ಹಣ ತನಗೂ ಗುರು–ಲಿಂಗ–ಜಂಗಮಕ್ಕೂ ವ್ಯಯಿಸಬೇಕು. ಗುರುಸೇವೆ, ಲಿಂಗ ಪೂಜೆ, ಜಂಗಮ ದಾಸೋಹ ಇವು ಕಾಯಕದ ನಿರ್ದಿಷ್ಟ ಗುರಿ. ಬೇಕಾದಷ್ಟೇ ಹಣ ಗಳಿಸಬೇಕು. ಹೆಚ್ಚಿನ ಗಳಿಕೆ ಕಾಯಕಕ್ಕೆ ಹೊರಗು. ಏನೇ ಕಾಯಕ ಕೈಕೊಂಡರೂ ಅದು ಗುರು–ಲಿಂಗ–ಜಂಗಮಕ್ಕೆ ಎನ್ನುವ ಭಾವನೆ ಬಲಿಯ ಬೇಕೆಂಬುದನ್ನು ಬಸವಣ್ಣನವರ ವಚನದಲ್ಲಿ ಕಾಣಬಹುದು.

"ನಾನು ಆರಂಭವ ಮಾಡುವೆನಯ್ಯಾ ಗುರುಪೂಜೆಗೆಂದು,
ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು
ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ
ದಾಸೋಹಕ್ಕೆಂದು
ನಾನಾಪ ಕರ್ಮಂಗಳ ಮಾಡಿದರೆಯೂ
ಆ ಕರ್ಮ ಫಲ ಭೋಗವ ನೀ ಕೊಡುವೆಯೆಂಬುದ
ನಾನು ಬಲ್ಲೆನು ನೀ ಕೊಟ್ಟ ದ್ರವ್ಯವ ನಿಮಗಲ್ಲದೆ
ಮತ್ತೊಂದು ಕ್ರೀಯ ಮಾಡೆನು. ನಿಮ್ಮ ಸೊಮ್ಮಿಂಗೆ
ಸಲ್ಲಿಸುವೆನು, ನಿಮ್ಮಾಣೆ ! ಕೂಡಲಸಂಗಮ ದೇವಾ".

ಯಾವುದೇ ಕಾಯಕ ಕೈಕೊಂಡರೂ ಅದು ಶಿವನಿಗಾಗಿ ಎಂಬ ಭಾವನೆಯಿಂದ ಮಾಡಬೇಕು. ಕೊಡುವವ ಅವ, ಕೊಂಬುವವ ಅವನೇ ಎಂಬ ಭಾವನೆ ಇರಬೇಕು. ಹೊರತು ಅನ್ಯ ಭಾವನೆ

ಇರಬಾರದೆಂದು ಬಸವಣ್ಣನವರು ನುಡಿದಿದ್ದಾರೆ. ಸತ್ಯ ಶುದ್ಧ ಕಾಯಕದಲ್ಲಿ ಚಿತ್ತ ಸ್ವಚ್ಛಂದವಾಗಿರಬೇಕು ಎಂಬುದನ್ನು ಈ ವಚನದಿಂದ ಅರಿಯಬಹುದು.

"ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ
ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವ ಸದ್‌ಭಕ್ತಂಗೆ
ಎತ್ತ ನೋಡಿದತ್ತ
ಲಕ್ಷ್ಮಿ ತಾನಾಗಿಪ್ಪಳು ಮಾರಯ್ಯ ಪ್ರಿಯ ಅಮರೇಶ್ವರ
ಲಿಂಗದ ಸೇವೆಯುಳ್ಳನ್ನಕ್ಕ !"

ನಾವು ಏನೇ ಕಾಯಕ ಕೈಕೊಂಡರೂ ಮನಃಪೂರ್ವಕವಾಗಿ ಮಾಡ ಬೇಕು. ಹಾಗೆ ಮಾಡಿದಲ್ಲಿ ಲಕ್ಷ್ಮಿ ಎತ್ತ ನೋಡಿದತ್ತ ಇರು ವಳು. ಕಾರಣ ಪ್ರತಿಯೊಬ್ಬರು ತಮ್ಮ ತಮ್ಮ ಕಾಯಕವನ್ನು ಮನಶುದ್ಧಿಯಿಂದ ತಾವೇ ಮಾಡಬೇಕು ಹೊರತು ಅನ್ಯರಿಂದ ಮಾಡಿಸಬಾರದು. ಹಾಗೆ ಮಾಡಿಸಿದರೆ ಅದು ಲಿಂಗಕ್ಕೆ ಸಲ್ಲದು. "ತನ್ನಾಶ್ರಯದ ರತಿ ಸುಖವನ್ನು ತಾನುಂಬ ಊಟವನ್ನು ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ? ತನ್ನ ಲಿಂಗಕ್ಕೆ ತಾ ಮಾಡುವ ನಿತ್ಯ ನೇಮವ ಬೇರೊಬ್ಬರ ಕೈಯಲ್ಲಿ ಮಾಡಿಸ ಬಹುದೇ? ಎನ್ನುವಲ್ಲಿ ಅವರವರ ಕಾಯಕ ಅವರೇ ಮಾಡಬೇಕು ಹೊರತು ಅನ್ಯರಿಂದ ಮಾಡಿಸಬಾರದೆಂಬ ತಿಳುವಳಿಕೆಯನ್ನು ಇಲ್ಲಿ ಕಾಣಬಹುದು.

ಕಾಯಕ ಮಾಡಿ ಬಂದ ಹಣ, "ಇಂದಿಂಗೆ ನಾಳಿಂಗೆ ಬೇಕೆಂದೆನಾದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಕೂಡಲ ಸಂಗಮದೇವಾ" ಎಂದಿದ್ದಾರೆ ಬಸವಣ್ಣನವರು. ಒಬ್ಬನ

ಗಳಿಕೆಯೆಂದರೆ ಹಲವು ಜೀವಿಗಳ ನಾಶ, ಸಾವಿರ ಜನರ ಹೊಟ್ಟೆಗೆ ಕಲ್ಲು ಹಾಕಿ ಒಬ್ಬ ಶ್ರೀಮಂತನಾಗುವ ಗಳಿಕೆಯನ್ನು ಶರಣರು ತಿರಸ್ಕರಿಸಿದರು. ಸಮಾಜದಲ್ಲಿ ಶ್ರೀಮಂತ-ಬಡವನೆಂಬ ತಾರ ತಮ್ಯವೇ ಇರಬಾರದೆಂದು ಶರಣರು ಸಮತಾವಾದದ ನಾಂದಿ ಯನ್ನು ಹಾಡಿದರು. ಸತ್ಯ ಶುದ್ಧ ಕಾಯಕ ಅಂದಿನ ಸಮಾಜ ಜೀವನದ ಜೀವಾಳವಾಯಿತು. ಶಿವಶರಣರ ಈ ಕಾಯಕ ತತ್ವದಿಂದ ಅಂದಿನ ಸಮಾಜದಲ್ಲಿಯ ನಿರುದ್ಯೋಗ ನಿರ್ಮೂಲನ ವಾಯಿತು. ಗುರು-ಲಿಂಗ-ಜಂಗಮರನ್ನೂ ಸಹ ಕಾಯಕ ಮಾಡು ವಂತೆ ಮಾಡಿ ನಿರುದ್ಯೋಗವನ್ನು ನುಂಗಿ ನೀರು ಕುಡಿಯಿತು ಈ ಕಾಯಕ ತತ್ವ.

ಕಾಯಕವನ್ನು ದೃಢತೆಯಿಂದ, ಅಚಂಚಲತೆಯಿಂದ ಮಾಡುತ್ತ ಪ್ರಗತಿ ಹೊಂದಿ ಸಾಧಕನು ಮೆಲ್ಲಮೆಲ್ಲನೆ ಭಕ್ತ ನೆನಿಸುವನು. ಕಾಯಕ ಆವುದಾದಡೇನು ತನು-ಮನ ಬಳಲಿಸಿ ಗಳಿಸಿ ತಂದು ಗುರು-ಲಿಂಗ-ಜಂಗಮರನ್ನು ಮೆಚ್ಚಿಸಬೇಕೆಂಬು ದನ್ನು ಬಸವಣ್ಣನವರು ತಮ್ಮ ವಚನದಲ್ಲಿ ಸ್ಪಷ್ಟಪಡಿಸಿದ್ದಾರೆ.

ಕೃಷಿ ಕೃತ್ಯ ಕಾಯಕದಿಂದಾದಡೇನು?
ತನು ಮನ ಬಳಲಿಸಿ ತಂದು ದಾಸೋಹವ ಮಾಡುವ
ಪರಮ ಸದ್ಭಕ್ತನ ಪಾದವ ತೋರಯ್ಯಾ ಎನಗೆ!
ಅದೆಂತೆನೆ ಆತನ ತನು ಶುದ್ಧ, ಆತನ ಮನ ಶುದ್ಧ,
ಆತನ ನಡೆ ಶುದ್ಧ, ನುಡಿಯೆಲ್ಲ ಪಾವನವು......

ತನು-ಮನ ಬಳಲಿಸಿ ಗಳಿಸಿ ತಂದ ಹಣದಿಂದ ದಾಸೋಹವ ಮಾಡುವ ಭಕ್ತನೇ ಸದ್ಭಕ್ತ. ಆತನ ಮನ ಶುದ್ಧ, ತನು ಶುದ್ಧ

ನಡೆ-ನುಡಿ ಶುದ್ಧ, ಎಲ್ಲ ಪಾವನವು. ಅಂತವನ ಪಾದವ ತೋರಯ್ಯ ಎಂದು ಬಸವಣ್ಣನವರೇ ಬೇಡುವಲ್ಲಿ ನಿಜವಾದ ಕಾಯಕ ವ್ರತಧಾರಿಯಾದವನು ಬಂದ ಹಣವನ್ನು ನಿಷ್ಠೆಯಿಂದ ದಾಸೋಹಕ್ಕೆ ಸಲ್ಲಿಸಬೇಕು. ಅವನೇ ನಿಜವಾದ ಸದ್ಭಕ್ತನೆನಿಸಿ ಕೊಳ್ಳುವನು. ಇದನ್ನು ಬಿಟ್ಟು ಕಾಯುವ ಬಳಲಿಸದೆ ಬೇಡಿ ತಂದು ದಾಸೋಹ ಮಾಡುವುದು ದೇವರಿಗೆ ಸಲ್ಲದೆಂಬುದನ್ನು ಈ ಕೆಳಗಿನ ವಚನದಿಂದ ಅರಿಯಬಹುದು.

> “ಕಾಯಕವೆಂದು ಕಾಯುವ ಬಳಲಿಸದೆ, ತನು ಕರಗದೆ, ಮನ
> ನೋಯದೆ, ಬೇಡಿ ಕಾಡಿ ಮಾಡುವುದು ದಾಸೋಹವೇ ?
> ಆವ ಕಾಯಕ
> ವಾದಡೂ ಪ್ರಾಣವೇ ಕಡೆಯಾಗಿ, ದ್ರವ್ಯ ಕಡೆಯಾಗಿ,
> ಚಿತ್ತ ಶುದ್ಧದಲ್ಲಿ
> ಬಂದುದಕ್ಕೆ ಸರಿಗಂಡು, ದೇಹಿಗಳಿಗೆ ಒಂದೇ ಪ್ರಮಾಣದಲ್ಲಿ
> ಸರಿಗಂಡುದು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ
> ಲಿಂಗಕ್ಕೆ ತೃಪ್ತಿ.”

ಮನಶುದ್ಧಿಯಿಂದ ತನು ಮನ ಕರಗಿಸಿ ತಂದ ಹಣದಿಂದ ಮಾಡಿದ ದಾಸೋಹವೇ ಲಿಂಗಕ್ಕೆ ತೃಪ್ತಿ ಎಂದು ನುಡಿದ ಶರಣರು ಅಂದಿನ ಸಮಾಜದ ಜನತೆಗೆ ಕಾಯಕದ ನಿಜವಾದ ಸ್ವರೂಪವನ್ನು ಅರುಹಿ ಎಲ್ಲರನ್ನು ಉದ್ಯೋಗಿಗಳನ್ನಾಗಿ ಮಾಡಿದರು. ನವ ಸಮಾಜ ನಿರ್ಮಾಣಕ್ಕೆ ಶರಣರು ಕಾಯಕ ತತ್ವದ ಕೊಡುಗೆಯನ್ನಿತ್ತರು. ಪ್ರತಿಯೊಬ್ಬನು ಒಂದಿಲ್ಲೊಂದು ಕಾಯಕವನ್ನು ಮಾಡಲೇ ಬೇಕೆಂದು ಸಾರಿದರು.

"ಶಿವಯೋಗಿಯ ಶರೀರಂ ವೃಥಾ ಸವೆಯಲಾಗದು ಅನುಗೊಂಬನಿತು ಕಾಯಕಂ ನಡೆಯುತಿರಬೇಕು" ಎಂದಿದ್ದಾನೆ ಮಹಾಕವಿ ರಾಘವಾಂಕ. ಶಿವಯೋಗಿಯಾದರೂ ಕೂಡ ತನ್ನ ದೇಹವನ್ನು ವೃಥಾ ಸವೆಸದೆ ಕಾಯಕವನ್ನು ಮಾಡಬೇಕು. ಈ ಕಾಯಕ ವ್ಯಕ್ತಿಯ ಆತ್ಮವಿಕಾಸಕ್ಕೆ ಸಹಾಯಕ, ಸ್ವಾವಲಂಬನೆಯ ಮಹಾಮಂತ್ರವದು. ಕಾಯಕವಿಲ್ಲದೆ ಯಾವ ಶರಣನೂ ಜೀವಿಸಲಿಲ್ಲ. ಶರಣರು ನಾನಾ ಬಗೆಯ ಕಾಯಕ ಕೈಕೊಂಡು ಅವುಗಳಿಂದಲೇ ನಿಜವ ಸಾಧಿಸಿಕೊಂಡರು. ಅಂತೆಯೇ ಶರಣರು ನಡೆದ ಧರೆ ಪಾವನವಾಯಿತು. ಅವರಿಂದ ಮಾನವ ಕುಲ ಕೋಟಿಗೆ ಉದ್ಧಾರದ ಮಾರ್ಗ ತಿಳಿಯಿತು. ಮಾನವರಾಗಿಯೇ ಹುಟ್ಟಿ, ಮಾನವರಾಗಿಯೇ ಬೆಳೆದು ತಮ್ಮ ಸಿದ್ಧಿಯ ಮೂಲಕ ಶರಣರೆನಿಸಿಕೊಂಡರು. "ನುಡಿದಂತೆ ನಡೆದರು, ನಡೆದಂತೆ ನುಡಿದು" ಈ ಭೂಲೋಕವನ್ನೇ ಸ್ವರ್ಗಲೋಕಕ್ಕಿಂತ ಮಿಗಿಲೆನಿಸುವಂತೆ ಮಾಡಿದರು. ಬಸವಣ್ಣನವರ ಮಹಾಮನೆಯಲ್ಲಿ ದಿನಂಪ್ರತಿ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಗಣಂಗಳಿಗೆ ಭೋಜನವಾಗುತ್ತಿತ್ತೆಂದು ತಿಳಿದ ಕೆಲವರು ಶರಣರ ಕಾಯಕದ ಬಗ್ಗೆ ಸಂಶಯಪಟ್ಟು ದುಡಿಯದೇ ದೇಹ ಬೆಳೆಸುವರೆಂದು ಭಾವಿಸಿದ್ದುಂಟು. ಆದರೆ ಪ್ರತಿಯೊಬ್ಬ ಶರಣನು ತನ್ನ ಕಾಯಕವನ್ನು ಮುಗಿಸಿ ಬಂದು ಮಹಾಮನೆಯಲ್ಲಿ ಪ್ರಸಾದ ಸೇವನೆ ಮಾಡುತ್ತಿದ್ದ ಸಂಗತಿ ಅರಿವಾದಾಗ ಮಾತ್ರ ಸಂಶಯ ಪಡುವವರ ಸಂಶಯ ನಿವಾರಣೆ ಆಗಲು ಸಾಧ್ಯ.

ಅಂದಿನ ಶಿವಶರಣರೆಲ್ಲರೂ ಕಾಯಕ ಮಾಡುತ್ತಿದ್ದರೆಂಬುದನ್ನು ಅವರ ಹೆಸರಿನಲ್ಲೆ ತಿಳಿಯಬಹುದು. ಉದಾಹರಣೆ–

ನುಲಿಯ ಚಂದಯ್ಯ. ಇಲ್ಲಿ ಚಂದಯ್ಯನ ಹೆಸರಿನ ಜೊತೆಗೆ ಆತನ ಕಾಯಕ ನುಲಿ ಹೊಸೆಯುವದೆಂಬುದನ್ನು ಅರಿತುಕೊಳ್ಳಬಹುದು. ಇದೇ ರೀತಿ ಹಲವಾರು ಶರಣರ ಕಾಯಕವನ್ನು ಅವರ ಹೆಸರಿನಲ್ಲಿ ಕಾಣಬಹುದು.

| ಶಿವಶರಣರು | ಕಾಯಕ |
|---|---|
| ನುಲಿಯ ಚಂದಯ್ಯ | —ನುಲಿ ಹೊಸೆಯುವದು |
| ಮೋಳಿಗೆಯ ಮಾರಯ್ಯ | —ಕಟ್ಟಿಗೆ ಮಾರುವುದು |
| ಆಯ್ದಕ್ಕಿ ಮಾರಯ್ಯ | —ಹಕ್ಕಲ ಆರಿಸುವುದು |
| ಮಾದರ ಚೆನ್ನಯ್ಯ | —ಮೊಚ್ಚೆ ಹೊಲೆಯುವುದು |
| ಮೇದಾರ ಕೇತಯ್ಯ | —ಬಿದುರಿನ ಕೆಲಸ ಮಾಡುವವ |
| ಕಿನ್ನರಿ ಬೊಮ್ಮಯ್ಯ | —ಕಿನ್ನರಿ ಬಾರಿಸುವುದು |
| ಕಲಿಕೇತ ಬೊಮ್ಮಯ್ಯ | —ಹಾಸ್ಯಗಾರ ವೇಷ |
| ಅಂಬಿಗರ ಚೌಡಯ್ಯ | —ಅಂಬಿಗ |
| ಕುಂಬಾರ ಗುಂಡಯ್ಯ | —ಕುಂಬಾರಿಕೆ |
| ಹಡಪದ ಅಪ್ಪಣ್ಣ | —ಕ್ಷೌರಿಕ |
| ಮಡಿವಾಳ ಮಾಚಯ್ಯ | —ಅಗಸ |
| ಪಡಿಹಾರಿ ಮುತ್ತಣ್ಣ | —ದ್ವಾರಪಾಲಕ |
| ಗಾಳದ ಕನ್ನಪ್ಪ | —ಮೀನುಗಾರ |
| ಏಲೇಶ್ವರ ಕೇತಯ್ಯ | —ಒಕ್ಕಲುತನ |
| ಡೋಹರ ಕಕ್ಕಯ್ಯ | —ಡೋಹರ |
| ಅಲ್ಲಯ್ಯ | —ಸಂಗೀತ |
| ಗಟ್ಟಿವಾಳಯ್ಯ | —ನರ್ತಕ |
| ಸಕಲೇಶ ಮಾದರಸ | —ಕಲ್ಲುಗಾರಿಕೆ |
| ಬಾಹೂರ ಬ್ರಹ್ಮಯ್ಯ | —ತೋಟಗಾರಿಕೆ |

ಶಿವಶಂಕರಯ್ಯ —ಕಸಗೂಡಿಸುವುದು
ಗೋರಕ್ಷ —ಗೋವು ಕಾಯುವದು
ಚಿಕ್ಕ ದೇವಯ್ಯ —ಪಾತ್ರೆ ಮಾರುವವ
ಬಾಚಿ ಬಸವಪ್ಪ —ಬಡಿಗ
ಬಂಕನಾಥ —ಸೈನಿಕ
ವೈದ್ಯ ಸಂಗಣ್ಣ —ವೈದ್ಯ
ಕನಕದ ನಾಚಯ್ಯ —ಬಂಗಾರದ ವ್ಯಾಪಾರಿ
ರತ್ನದ ರಾಚಯ್ಯ —ರತ್ನ ವ್ಯಾಪಾರಿ
ಪುಷ್ಪದ ಸೋಮಯ್ಯ —ಹೂಗಾರ
ಒಕ್ಕಲು ಮುದ್ದಯ್ಯ —ಒಕ್ಕಲುತನ
ಸೂಲದ ಬ್ರಹ್ಮಪ್ಪ —ಸೈನಿಕ
ಕೊಟ್ಟಣದ ರೆಮ್ಮವ್ವೆ —ಕುಟ್ಟುವ ಕೆಲಸ
ಕದರಿ ರೆಮ್ಮವ್ವೆ —ನೂಲು ತೆಗೆಯುವದು
ಸಿದ್ಧ ದೇವಮ್ಮ —ವಾದ್ಯವಾದನ

ಅಂದಿನ ಕಾಲದ ಶಿವಶರಣ-ಶರಣೆಯರು ಭಿನ್ನ ಭಿನ್ನ ಕಾಯಕ ಜೀವನ ನಡೆಸಿದರು. ಅದರಲ್ಲಿ ಮೇಲು-ಕೀಳೆಂಬ ಭಾವನೆ ಇರಲಿಲ್ಲ. ಕಾಯಕ ಚಿಕ್ಕದಾಗಿರಲಿ, ದೊಡ್ಡದಾಗಿರಲಿ ಅದನ್ನೇ ನಿಷ್ಠೆಯಿಂದ ನೆರವೇರಿಸಿಕೊಂಡು ಹೋಗುವ ಜವಾಬ್ದಾರಿ ಅವರದಾಗಿತ್ತು. ಹೀಗಾಗಿ ಆ ಕಾಲಕ್ಕೆ ವೃತ್ತಿಭೇದವಿರಲಿಲ್ಲ ಎಂಬುದು ಶರಣರ ಕಾಯಕ ಜೀವನವನ್ನು ಅರಿತಾಗ ಮನವರಿಕೆಯಾಗುತ್ತದೆ. ಎಲ್ಲಾ ಶಿವಶರಣರ ಕಾಯಕ ಜೀವನವು ಮಹತ್ವಪೂರ್ಣವಾಗಿದ್ದಾಗಿದೆ. ಎಲ್ಲಾ ಶರಣರ ಕಾಯಕ ಜೀವನವನ್ನು ವಿವರಿಸುತ್ತ ಹೋದರೆ ಇದೊಂದು ದೊಡ್ಡ ಹೊತ್ತಿಗೆಯಾಗುತ್ತದೆ. ಕಾರಣ ಇಲ್ಲಿ ಕೆಲವರ ಕಾಯಕ ಜೀವನವನ್ನು ಮಾತ್ರ ನೋಡಬಹುದು.

## ೪. ಶಿವಶರಣರು-ಕಾಯಕ ಜೀವನ

### ೧) ನುಲಿಯ ಚಂದಯ್ಯ-ನುಲಿ ಹೊಸೆಯುವ ಕಾಯಕ

"ಕಾಯಕದಲ್ಲಿ ನಿರತನಾದರೆ ಲಿಂಗದ ಹಂಗಾದರೂ ತೊರೆಯಬೇಕು" ಎಂಬ ಶರಣರ ನುಡಿಗೆ ನುಲಿಯ ಚಂದಯ್ಯನ ಜೀವನವೇ ನಿದರ್ಶನವಾಗಿದೆ. ನುಲಿ ಹೊಸೆಯುವದೇ ಈತನ ಕಾಯಕವಾಗಿದ್ದರಿಂದ ನುಲಿಯ ಚಂದಯ್ಯ ಎಂದು ಕರೆಯುತ್ತಿದ್ದರು. ಕಾಯಕದಲ್ಲಿ ನಿರತನಾಗಿ ಲಿಂಗದ ಹಂಗು ತೊರೆದ ಧೀರ ಶರಣನೀತ. ಕಲ್ಯಾಣದ ಕೇರಿಯೊಂದರಲ್ಲಿ ನುಲಿ ಹೊಸೆದು ಅದರಿಂದ ಬಂದ ದ್ರವ್ಯದಿಂದ ಜೀವನ ಸಾಗಿಸುವುದೇ ಚಂದಯ್ಯನ ದಿನಚರಿ ಆಗಿತ್ತು. "ಗುರುವಾದರೂ ಕಾಯಕದಿಂದಲೆ ಜೀವನ್ಮುಕ್ತಿ, ಲಿಂಗವಾದರೂ ಕಾಯಕದಿಂದಲೆ ಶಿಲೆಯ ಕುರುಹು ಹರಿವುದು; ಜಂಗಮವಾದರೂ ಕಾಯಕದಿಂದಲೆ ತನ್ನ ವೇಷದ ಪಾಶ ಹರಿವುದು" ಎಂದು ಘಂಟಾಘೋಷವಾಗಿ ಸಾರಿದ ಧೀರ ಶರಣನೀತ.

ಪ್ರತಿನಿತ್ಯ ಹಳ್ಳಕ್ಕೆ ಹೋಗಿ ಹುಲ್ಲನ್ನು ತಂದು ಅದರಿಂದ ನುಲಿ, ಕಣ್ಣಿ, ಹಗ್ಗ ಹೊಸೆದು, ಅವುಗಳನ್ನೇ ಮಾರಿ ಬಂದ ಹಣದಿಂದ ಜಂಗಮಾರಾಧನೆ ನಡೆಸುತ್ತಿದ್ದ ಚಂದಯ್ಯ. "ಕಾರೆಯ ಕಾಯಿ, ಕಾಡುಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಶೆಯಿಂದ ಬಂದುದು ಅನರ್ಪಿತ. ಇದು ಕಾರಣ ಸತ್ಯ ಶುದ್ಧ ಕಾಯಕದ ನಿತ್ಯ ದ್ರವ್ಯವಾದರೆ

ಚಂದೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು." ಎಂದು ಭಾವಿಸಿದ ಈ ಶರಣ ಸತ್ಯ ಶುದ್ಧ ಕಾಯಕದಿಂದ ಬಂದ ಹಣದಿಂದಲೇ ಚಂದೇಶ್ವರ ಲಿಂಗಕ್ಕೆ ತೃಪ್ತಿಪಡಿಸಿ ತಾನೂ ತೃಪ್ತಿಪಡುತ್ತಿದ್ದ. ಹೀಗಿರುತ್ತಿರಲು ಒಂದು ದಿನ ಎಂದಿನಂತೆ ಹಳ್ಳದಲ್ಲಿ ಹುಲ್ಲು ಕೊಯ್ಯುತ್ತಿರುವಾಗ ಚಂದಯ್ಯನ ಅಂಗದ ಮೇಲಿನ ಲಿಂಗ ಜಾರಿ ನೀರಿನಲ್ಲಿ ಬಿದ್ದಿತು. ಕಾಯಕದಲ್ಲೆ ತಲ್ಲೀನನಾದ ಚಂದಯ್ಯ ಅದನ್ನು ಗಮನಿಸದೆ ತನ್ನ ಕರ್ತವ್ಯ ಮುಗಿಸಿ ಹುಲ್ಲು ಹೊರೆ ಮಾಡಿ ಕಟ್ಟಿ ಹೊತ್ತುಕೊಂಡು ಹೊರಟನು.

ಇಷ್ಟಲಿಂಗವನ್ನು ಹಾಗೆ ಬಿಟ್ಟು ಹೊರಟಿದ್ದರಿಂದ ಈತನ ದೃಢನಿಲುವಿಗೆ ಮೆಚ್ಚಿದ ಲಿಂಗವೇ ಅವರನ್ನು ಹಿಂಬಾಲಿಸಿ ಹೊರಟಿತು. 'ನಾನು ಹೋಗೆನ್ನದೆ ಹಾಗೆಯೇ ಹೋಗಿರುವ ನಿನ್ನನ್ನು ಮರಳಿ ಸ್ವೀಕರಿಸಲಾರೆ'. ಎಂದು ಚಂದಯ್ಯ ಲಿಂಗಕ್ಕೆ ನುಡಿದು ಹಾಗೆಯೇ ಹೊರಡಲು ಮಡಿವಾಳ ಮಾಚಯ್ಯನವರ ಮಧ್ಯಸ್ಥಿಕೆಯಿಂದ 'ಕಾಯಕದಲ್ಲಿ ನೆರವಾಗುವುದಾದರೆ ಮನೆಗೆ ಬರಲಿ' ಎಂದು ಕರಾರು ಹಾಕುತ್ತಾನೆ. ಅದಕ್ಕೆ ಲಿಂಗದೇವ ಒಪ್ಪುತ್ತಾನೆ. 'ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುರುಹು ಹರಿವುದು' ಎಂಬುದೇ ಈ ಶರಣನ ಅಭಿಮತವಾಗಿತ್ತು. ಈ ಕಾರಣದಿಂದಲೇ ಲಿಂಗದೇವ ಕಾಯದಲ್ಲಿ ನೆರವಾಗುವನೆಂಬ ಅಭಿಮತದಿಂದ ಒಪ್ಪಿದ. ಚಂದಯ್ಯನ ಕರಾರಿನ ಮೇರೆಗೆ ತಾನೊಂದು ಕಣ್ಣಿ ಹೊಸೆದು, ಅದನ್ನು ಮಾರಲು ಹೊರಟಾಗ ಯಾರೂ ಕೊಂಡುಕೊಳ್ಳದಿರಲು. ಕೊನೆಗೆ ಬಸವಣ್ಣನವರು ಸಾವಿರ ಹೊನ್ನುಗಳನ್ನು ಕೊಟ್ಟು ಅದನ್ನು ಕೊಂಡು ಕೊಂಡರು. ಸಾವಿರ ಹೊನ್ನುಗಳನ್ನು ತೆಗೆದುಕೊಂಡು ಮನೆಗೆ ಬಂದ ಲಿಂಗ

ದೇವನನ್ನು ಕಂಡ ಚಂದಯ್ಯ "ಇದು ಆಶೆಯಿಂದ ಬಂದ ಹೊನ್ನು, ಕಾಯಕಕ್ಕೆ ಸಲ್ಲ"ದೆಂದು ಚಂದಯ್ಯ ಒಂದು ನಾಣ್ಯವನ್ನು ಮಾತ್ರ ಉಳಿಸಿಕೊಂಡು, ಉಳಿದುದನ್ನು ಬಸವಣ್ಣನವರಿಗೆ ಹಿಂದಿರುಗಿ ಕಳಿಸಿದನೆಂದು ಈತನ ಚರಿತ್ರೆಯಿಂದ ತಿಳಿದು ಬರುತ್ತದೆ. ಅದೇನೇ ಇದ್ದರೂ ಇಲ್ಲಿ ನಾವು ಮೆಚ್ಚಬೇಕಾದುದು ಚಂದಯ್ಯನ ಕಾಯಕ ನಿಷ್ಠೆ.

## ೨) ಮೋಳಿಗೆ ಮಾರಯ್ಯ–ಕಟ್ಟಿಗೆ ಮಾರುವ ಕಾಯಕ

ಕಾಶ್ಮೀರ ಪ್ರಾಂತದ ದೊರೆಯಾಗಿದ್ದ ಮಹಾದೇವ ಭೂಪಾಲ ಹಾಗೂ ರಾಣಿ ಗಂಗಾದೇವಿ ಇಬ್ಬರೂ ಆ ನಾಡನ್ನು ಬಿಟ್ಟು ರಾಜವೈಭವವನ್ನೆಲ್ಲಾ ತ್ಯಾಗ ಮಾಡಿ ಭಕ್ತಿಯ ಬೀಡಾದ ಕಲ್ಯಾಣಕ್ಕೆ ಬಂದರು. 'ಅನುಭವ ಮಂಟಪ'ವು ಮಹಾದೇವ ಭೂಪಾಲನನ್ನು ಮೋಳಿಗೆ ಮಾರಯ್ಯನನ್ನಾಗಿ, ರಾಣಿ ಗಂಗಾ ದೇವಿಯನ್ನು ಮಹಾದೇವಿಯನ್ನಾಗಿ ಮಾರ್ಪಡಿಸಿತು. ಮಾರ ಯ್ಯನ ಪಾಲಿಗೆ ಮೋಳಿಗೆಯ, ಕಟ್ಟಿಗೆಯ ಹೊರೆಯ ತಂದು ಮಾರಿ ದಾಸೋಹ ಸಾಗಿಸುವ ಕಾಯಕ ಬಂದಿತು. ದಂಪತಿ ಗಳಿಬ್ಬರು ಹಿಂದಿನ ರಾಜ ವೈಭವವನ್ನೆಲ್ಲಾ ಮರೆತು ಕಲ್ಯಾಣ ದಲ್ಲಿ ನೆಲೆಸಿ ನಿತ್ಯ ಕಾಯಕದಲ್ಲೇ ತಲ್ಲೀನರಾಗಿದ್ದನ್ನು ಕಂಡರೆ ಯಾರಿಗೆ ಆಶ್ಚರ್ಯವಾಗಲಿಕ್ಕಿಲ್ಲ. ಕಾಶ್ಮೀರದ ದೊರೆ ಕಟ್ಟಿಗೆ ಮಾರಿ ಬದುಕಲು ಕಲ್ಯಾಣಕ್ಕೆ ಬಂದನೆಂದರೆ ಬಸವಣ್ಣನವರ ಭಕ್ತಿಯ ಪ್ರಭಾವ ಎಲ್ಲಿಯವರೆಗೂ ಪಸರಿಸಿತೆಂಬುದು, ಎಷ್ಟೊಂದು ಜನಮನವನ್ನು ಸೂರೆಗೊಂಡಿತೆಂಬುದರ ಅರಿವು ಇಂತಹ ಶರಣನ ಜೀವನ ಚರಿತ್ರೆಯ ಮೂಲಕ ತಲೆದೋರುವುದು.

ಕಲ್ಯಾಣದ ಕೊನೆಯೊಂದರ ಸಣ್ಣ ಗುಡಿಸಲೊಂದರಲ್ಲಿ ಮಾರಯ್ಯ-ಮಹಾದೇವಿಯರ ಶರಣ ಜೀವನ ಸಾಗಿದ್ದಿತು. ಈ ದಂಪತಿಗಳು ಇರುವ ಮನೆ ಸಣ್ಣದಾದರೂ ಇವರ ಮನ ಮಾತ್ರ ದೊಡ್ಡದಾಗಿದ್ದಿತು. ಮಾರಯ್ಯ ಪ್ರತಿ ದಿನ ಕಟ್ಟಿಗೆ ತಂದು ಅದರಿಂದ ಬಂದ ಹಣದಿಂದ ಜಂಗಮಾರಾಧನೆ ಮಾಡುತ್ತಿದ್ದ. ಮಾರಯ್ಯನ ಮನೆಯ ಅಂಬಲಿ ಸವಿ ಕಂಡ ಜಂಗಮರು ಬಸವಣ್ಣ ನವರಿಗೆ ನಿನ್ನ ರಸಾನ್ನಕ್ಕೆ ಮಿಗಿಲೆಂದು ನುಡಿದರು. ಆಗ ಬಸವಣ್ಣ ನವರು ಮಾರಯ್ಯನವರ ಬಡತನ ಹೋಗಲಾಡಿಸಬೇಕೆಂದು ನಿರ್ಧರಿಸಿ ಛದ್ಮವೇಷದಿಂದ ಅವರ ಮನೆಗೆ ಬರಲು ಮಾರಯ್ಯ ಇಲ್ಲದ್ದರಿಂದ ಅವನ ಪತ್ನಿ ಮಹಾದೇವಿ ಮಾಡಿದ ಅತಿಥಿ ಸತ್ಕಾರವನ್ನು ಮುಗಿಸಿಕೊಂಡು ಬರುವಾಗ ಅವರ ಬಡತನ ಕಳೆಯಲೆಂದು ಎರಡು ಸಾವಿರ ಹೊನ್ನುಗಳ ಗಂಟನ್ನು ಗೊತ್ತಾಗ ದಂತೆ ಇರಿಸಿ ಬರುತ್ತಾನೆ.

ನಿತ್ಯ ಕಾಯಕ ಮುಗಿಸಿಕೊಂಡು ಮನೆಗೆ ಬಂದ ಮಾರಯ್ಯ ನನ್ನು ಮಹಾದೇವಿ ಸ್ವಾಗತಿಸಿ ಕಾಲು ತೊಳೆಯಲು ನೀರು ಕೊಟ್ಟಳು. ಮಾರಯ್ಯ ಬಚ್ಚಲು ಮನೆಗೆ ಹೋಗುವಾಗ ಹೊನ್ನ ಜಾಳಿಗೆಗಳು ಅವನ ದೃಷ್ಟಿಗೆ ಕಂಡಾಗ ಆಶ್ಚರ್ಯ ವಾಗಿ ಸತಿಯನ್ನು ಕೇಳಲಾಗಿ ಛದ್ಮವೇಷದಲ್ಲಿ ಬಂದು ಹೋದ ಸಮಾಚಾರ ಅರುಹಲು, ಬಂದವನು ಬಸವಣ್ಣನಿರಬೇಕೆಂದು ಮಾರಯ್ಯ ಸಂತೋಷಪಟ್ಟನು. ಹೊನ್ನಜಾಳಿಗೆಗಳನ್ನು ಇಟ್ಟು ಹೋಗಿರುವುದು ಬಸವಣ್ಣನವರೇ ಎಂದು ತಿಳಿದು ಅವುಗಳಿಗೆ ಆಸೆಪಡದೆ ಜಂಗಮರಿಗೆ ಕೊಟ್ಟು ಅವರ ಪಾದೋದಕವನ್ನು ಕಟ್ಟಿಗೆಯ ಹೊರೆಯ ಮೇಲೆ ಚಿಮುಕಿಸಲು ಅವೆಲ್ಲಾ ಚಿನ್ನದ

ಕಟ್ಟಿಗೆಗಳಾದವು. ಚಿನ್ನದ ಕಟ್ಟಿಗೆ ತುಂಡುಗಳನ್ನು ಸಹ ಬಂದ ಜಂಗಮರಿಗೆ ಹಂಚಿ ಬಿಟ್ಟನು. ಈ ಸಮಾಚಾರ ತಿಳಿದ ಬಸವಣ್ಣನವರಿಗೆ ಮಾರಯ್ಯನ ವ್ಯಕ್ತಿತ್ವದ ಅರಿವಾಗಿ ಓಡೋಡಿ ಬಂದು ನಮಸ್ಕರಿಸಿ ಮಾರಯ್ಯನಲ್ಲಿ ತಮ್ಮ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡರು. ಇದನ್ನೆಲ್ಲಾ ನೋಡಲಾಗಿ ಮಾರಯ್ಯ ಬಸವಣ್ಣನವರು ಇಟ್ಟುಹೋದ ಹೊನ್ನಿಗೆ ಆಶೆ ಮಾಡದೆ ಅವುಗಳನ್ನೆಲ್ಲ ಜಂಗಮರಿಗೆ ದಾನ ಮಾಡಿದ್ದು, ಜಂಗಮರ ಪಾದೋದಕದಿಂದ ತನ್ನ ಕಟ್ಟಿಗೆಯ ಹೊರೆಯನ್ನು ಹೊನ್ನಿನ ತುಂಡುಗಳಾಗಿ ಪರಿವರ್ತನೆ ಮಾಡಿದ್ದು ಅವನ ಕಾಯಕ ನಿಷ್ಠೆ ಹಾಗು ಸ್ವಾಮಿ ಭಕ್ತಿಯ ದ್ಯೋತಕವೆನ್ನಬಹುದು.

## ೩) ಆಯ್ದಕ್ಕಿ ಲಕ್ಕಮ್ಮ

ಬಸವಣ್ಣನವರ ಕಾಲದ ಮಹಿಳೆಯರು ಭಾಗ್ಯಶಾಲಿಗಳು. ಅವರೆಲ್ಲರೂ ಶರಣರ ಮಹತ್ ಸಾಧನೆಯಲ್ಲಿ ಸಹಭಾಗಿಗಳಾದವರು. ಅಂದಿನ ಕಾಲದ ಶರಣರು ಅಮರರಾಗಲು ಅವರ ಜೀವನದಲ್ಲಿ ಸಹಭಾಗಿಗಳಾಗಿ ಜೀವನ ಸಾಗಿಸಿದ ಅವರ ಧರ್ಮಪತ್ನಿಯರು ಕಾರಣರು. "ಕಾಯಕವೇ ಕೈಲಾಸ"ವೆಂದು ಸಾರಿದ ಅಣ್ಣನವರ ದಿವ್ಯ ಮಂತ್ರ ಕೇವಲ ಪುರುಷರಿಗಲ್ಲ, ಮಹಿಳೆಯರಿಗೂ ಅನ್ವಯಿಸುತ್ತದೆಂಬುದನ್ನು ಸ್ವತಃ ಆ ಕಾಲದ ಮಹಿಳೆಯರು ಮಾಡಿ ತೋರಿಸಿದರು. ಪುರುಷರಂತೆ ಸ್ತ್ರೀಯರೂ ನಿಷ್ಠೆಯ ಕಾಯಕ ಜೀವನ ಸಾಗಿಸಿದರಲ್ಲದೆ, ಪುರುಷರು ತಮ್ಮ ಕಾಯಕವನ್ನು ಮರೆತಾಗ ಅವರಿಗೆ ಅದರ ನೆನಪು ಮಾಡಿಕೊಟ್ಟು ಅವರನ್ನು ಕಾಯಕದಲ್ಲಿ ತೊಡಗಿಸಿದ ಮಹಿಳೆಯರು ಉಂಟು. ಅಂತಹ ಮಹಿಳೆಯರಲ್ಲಿ ಲಕ್ಕಮ್ಮನೆಂಬ ಶಿವಶರಣೆಯೂ ಹೌದು.

ಲಕ್ಕಮ್ಮ ಆಯ್ದಕ್ಕಿ ಮಾರಯ್ಯನ ಧರ್ಮಪತ್ನಿ ಕಲ್ಯಾಣ ದಲ್ಲಿ ಬಾಳಿದ ಈ ದಂಪತಿಗಳು ಬಾಳಿನಲ್ಲಿ ಬಡವರಾದರೂ ಭಕ್ತಿಯ ಬದುಕಿನಲ್ಲಿ ಬಲ್ಲಿದರು. ಕಾಯಕದ ಬಗ್ಗೆ ಲಕ್ಕಮ್ಮನೇ ಮಾರಯ್ಯನಿಗೆ ಅರಿವು ಮೂಡಿಸಿದ ಮಹಾ ಸಾಧ್ವಿ. ಈ ದಂಪತಿ ಗಳ ಜೀವನ ಇಂದು ಮಾನವ ಕೋಟಿಗೆ ಆದರ್ಶವಾಗಬೇಕಾಗಿದೆ. ಪತಿ ಕಾಯಕವನ್ನೇ ಮರೆತಾಗ ಲಕ್ಕಮ್ಮ, "ಕಾಯಕ ನಿಂದಿತ್ತು ಏಳಯ್ಯ ಎನ್ನಾಳ್ದನೆ! ಭಾವ ಶುದ್ಧವಾಗಿ ಮಹಾ ಶರಣರ ತಿಪ್ಪೆಯ ತಪ್ಪಲ ಅಕ್ಕಿಯ ತಂದು ನಿಶ್ಚೈಸಿ ಮಾಡಬೇಕು. ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ಬೇಗ ಹೋಗಿ ಮಾರಯ್ಯ!" ಎಂದು ಎಚ್ಚರಿಸುತ್ತಾಳೆ. ಪತ್ನಿಯ ನುಡಿಯಿಂದ ಎಚ್ಚೆತ್ತ ಮಾರಯ್ಯ ದಿನ ನಿತ್ಯದ ಆಯ್ದು ತರುವ ಕಾಯಕಕ್ಕೆ ಹೋಗುತ್ತಾನೆ. ಅಂದು ಒಂದು ಘಟನೆ ನಡೆಯಿತು. ಅದು ಮಾರಯ್ಯನ ಜೀವನವನ್ನು ಮಾರ್ಪಡಿಸಿತು. ಸರದಿಯ ಪ್ರಕಾರ ಬಸವಣ್ಣನವರ ಮಹಾಮನೆಯ ಮುಂದಿನ ಅಕ್ಕಿಯನ್ನು ಆಯ್ದು ತರಬೇಕಾಗಿದ್ದಿತು. ಬಸವಣ್ಣನವರಿಗೆ ಇದು ತಿಳಿದು ಅಂದು ಅಂಗಳದಲ್ಲಿ ಹೆಚ್ಚಾಗಿ ಅಕ್ಕಿಯನ್ನು ಮಾರಯ್ಯನವರಿಗೆ ಶ್ರಮ ಸ್ವಲ್ಪ ಕಡಿಮೆ ಆಗಲೆಂದು ಸುರಿಸಿದ್ದರು. ಏನು ಅರಿಯದ ಮಾರಯ್ಯನವರು ಎಷ್ಟು ಕಡಿಮೆ ಆರಿಸಿದರೂ ದಿನಕ್ಕಿಂತ ಹೆಚ್ಚಾಗಿಯೇ ಅಕ್ಕಿ ಸಂಗ್ರಹವಾದವು ಅವರ ಉಡಿಯಲ್ಲಿ. ಬೇರೆ ಏನು ವಿಚಾರ ಮಾಡದೆ ಮನೆಗೆ ಮರಳಿದರು.

ಮಾರಯ್ಯ ದಿನಕ್ಕಿಂತಲೂ ಹೆಚ್ಚು ಅಕ್ಕಿಯನ್ನು ತಂದುದು ಲಕ್ಕಮ್ಮನಿಗೆ ತೋರಿಸಿದಾಗ, ಎಂದೂ ಇಲ್ಲದ್ದು ಇಂದೇಕೆ ಇಷ್ಟೊಂದು ಅಕ್ಕಿ ತಂದಿರಿ ಎಂದು ಕೇಳಿದಾಗ, "ಇಂದು

ಅಣ್ಣನವರ ಅಂಗಳದಲ್ಲಿ ಆಯುವುದಿದ್ದಿತು. ಅಲ್ಲಿ ಅಕ್ಕಿ ಹೇರಳವಾಗಿ ಸುರಿದಿದ್ದವು. ಎಷ್ಟು ಕಡಿಮೆ ಆಯ್ದರೂ ಇಷ್ಟಾಗಿವೆ" ಎಂದು ಮಾರಯ್ಯ ಉತ್ತರಕೊಟ್ಟ. ಆಗ ಲಕ್ಕಮ್ಮ "ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ. ಇದು ನಿಮ್ಮ ಮನವೋ?" ಎಂದು ಪ್ರಶ್ನಿಸುತ್ತಾಳೆ. ಪತ್ನಿಯ ಈ ನುಡಿ ಕೇಳಿ ಮಾರಯ್ಯ ದಿಗ್ಭ್ರಾಂತನಾದ. ಕೊನೆಗೆ ಲಕ್ಕಮ್ಮ ಹೆಚ್ಚಿಗೆ ತಂದ ಅಕ್ಕಿಯನ್ನು ಸುರಿದು ಬರಲು ತಿಳಿಸುತ್ತಾಳೆ. ಆಗ ಮಾರಯ್ಯ "ಮತ್ತೆ ಅಲ್ಲಿಯೇ ಸುರಿದು ಬಂದರೆ ಬಸವಣ್ಣನವರು ಏನೆಂದು ಕೊಂಡಾರು, ಎಷ್ಟು ನೊಂದು ಕೊಂಡಾರು." ನಾವು ಬಡವರೆಂದು ನಮ್ಮ ಶ್ರಮ ಕಡಿಮೆ ಆಗಲೆಂದು ಅಂಗಣದಲ್ಲಿ ಬೇಕೆಂದೇ ಹೆಚ್ಚು ಅಕ್ಕಿ ಸುರಿಸಿದಂತಿದೆ ಎಂದಾಗ ಲಕ್ಕಮ್ಮ ಕೊಡುವ ಉತ್ತರ ಬಹು ಮಾರ್ಮಿಕವಾಗಿದೆ. "ಬಡತನವೆಂಬ ಶಬ್ದ ನಿಮ್ಮ ಬಾಯಿಂದ ಬರಬೇಕೆ ಎನ್ನರಸ? ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ?" ಮನೆ ನೋಡಾ ಬಡವರು, ಮನ ನೋಡಾ ಸಂಪನ್ನರಾದ ಶರಣರಿಗೆ ಬಡತನವೆಂಬ ಶಬ್ದವೇ ಬರಬಾರದೆಂದು, ಕಾಯಕವಲ್ಲದ ಹಂಗಿನ ಇಂತಹ ಅಕ್ಕಿಯು ಬೇಡ ಎಂದಾಗ ಮಾರಯ್ಯ ತನ್ನ ಪತ್ನಿಗೆ ಹಂಗಿನ ಪ್ರಶ್ನೆ ಇಲ್ಲೆಲ್ಲಿದೆ. ಅಣ್ಣನವರ ಮನೆಯ ಅಕ್ಕಿ ಒಂದಿಷ್ಟು ನಮ್ಮ ಮನೆಯಲ್ಲಿ ಉಳಿದರೆ ಮನೆ ಪವಿತ್ರವಾಗುತ್ತದೆಂಬ ಆಶೆಯಿಂದ ತಂದೆ ಎಂದಾಗ ಲಕ್ಕಮ್ಮ ಇಡೀ ಮಾನವ ಕುಲಕೋಟಿಯೇ ಮರೆಯಲಾರದಂಥ ಅಮೃತವಾಣಿಯನ್ನು ನುಡಿಯುತ್ತಾಳೆ.

> ಆಶೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯ?
> ರೋಷವೆಂಬುದು ಯಮಧೂತರಿಗಲ್ಲದೆ ಅಜಾತರಿಗುಂಟೆ ಅಯ್ಯ? ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ!

ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ
ದೂರ ಮಾರಯ್ಯ!"

ಪತ್ನಿಯ ಈ ನುಡಿಗಳು ಕಿವಿಗೆ ಬೀಳುತ್ತಲೇ ತನ್ನ ತಪ್ಪಿನ ಅರಿವು ಮೆಲ್ಲನೆ ಆಗತೊಡಗಿತು. ಆಗ ಮಾರಯ್ಯನಲ್ಲಿ ಈಸಕ್ಕಿಗಾಗಿ ತೋರಿದ ಆಶೆಯೂ ಆಶೆಯೇ, ಅಷ್ಟೈಶ್ವರ್ಯಕ್ಕಾಗಿ ಹಾತೊರೆದರೂ ಆಶೆಯೇ! ಆಶೆಯಲ್ಲಿ ಹಿರಿದು, ಕಿರಿದೆಂಬ ಭೇದವಿಲ್ಲವೆಂಬ ಜ್ಞಾನದ ಬೆಳಕು ಮೂಡಿತು.

ಪತ್ನಿಯು ಬಿಟ್ಟರೆ ಬೇರೆ ಗುರುಗಳ ಗೊಡವೆಯೇಕೆ ಎನ್ನುವಷ್ಟರ ಮಟ್ಟಿಗೆ ಆತನ ಭಾವ ಬಲಿತಾಗ, ಆನಂದದಿಂದ ಮುಂದೇನು ಮಾಡಲಿ ಎಂಬಂತೆ ಸತಿಯತ್ತ ನೋಡಿದಾಗ ಲಕ್ಕಮ್ಮ "ಹೆಚ್ಚಿನ ಅಕ್ಕಿಗಾಗಿ ಆಶೆ ಪಡುವಂತೆ ಮಾಡಲು ಕಾರಣ ಕರ್ತರಾದ ಬಸವಣ್ಣನಿಗೆ ಬುದ್ಧಿಗಲಿಸಬೇಕಾಗಿದೆ. ಅವರಿಗೂ ಹಾಗೂ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೂ ತಮ್ಮ ಮನೆಯ ಪ್ರಸಾದಕ್ಕೆ ಆಹ್ವಾನ ಕೊಟ್ಟು ಬರುವಂತೆ ತಿಳಿಸಿದಳು." ಈ ಮಾತು ಕೇಳಿ ಮಾರಯ್ಯ ಅವಾಕ್ಕಾದ. ಪ್ರತಿ ದಿನ ಆಯ್ದ ಅಕ್ಕಿಯಿಂದ ಜೀವನ ಸಾಗಿಸುವ ತಮ್ಮಿಂದ ಅಸಂಖ್ಯಾತ ಶರಣರಿಗೆ ಆರೋಗಣೆ ಮಾಡುವುದು ಸಾಧ್ಯವೇ ಎಂಬ ಸಮಸ್ಯೆ ಉದ್ಭವಿಸಿ ಮೌನನಾದಾಗ ಪತಿಯ ಮೌನ ಸೂಚನೆ ಅರಿತ ಲಕ್ಕಮ್ಮ ಹೇಳುವ ಮಾತುಗಳು ಮಹಿಳಾಕುಲದ ಹಿರಿತನದ ಹೆಗ್ಗುರುತಾಗಿದೆ.

"ಅಂಜದಿರು ಎನ್ನಾಳ್ದ, ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧದಲ್ಲಿ ಕಾಯಕವ ಮಾಡುವ ಸದ್ ಭಕ್ತಂಗೆ ಎತ್ತ ನೋಡಿದತ್ತಾ ಲಕ್ಷ್ಮಿತಾನಾಗಿಪ್ಪಳು, ಮಾರಯ್ಯ ಪ್ರಿಯ ಅಮರೇಶ್ವರ ಲಿಂಗದ ಸೇವೆಯುಳ್ಳನ್ನಕ್ಕ!"

ಎಂದು ಅಂಜಿದ ಪತಿಗೆ ಹೇಳುವ ಧೈರ್ಯದ ಮಾತುಗಳು ಮೆಚ್ಚ ತಕ್ಕದ್ದು. ಪತ್ನಿಯ ಮಾತಿನಿಂದ ಧೈರ್ಯಹೊಂದಿದ ಮಾರಯ್ಯ ಮರು ಮಾತನಾಡದೇ ಶರಣರನ್ನು ಕರೆದು ತಂದ. ಲಕ್ಕಮ್ಮ ಆಯ್ದಕ್ಕಿಯ ಅನ್ನ ಮಾಡಿ ಅದನ್ನೇ ಎಲ್ಲರಿಗೂ ಎಡೆ ಮಾಡಿದಳು. ಎಲ್ಲರೂ ಆರೋಗಿಸಿ ಸಂತೃಪ್ತರಾದರು.

ಬಡವರಾದ ಈ ಶರಣ ದಂಪತಿಗಳು ಆಯ್ದಕ್ಕಿ ಯಲ್ಲಿಯೇ ಇಷ್ಟೊಂದು ಶರಣರಿಗೆ ಊಟ ಮಾಡಿಸಿದ್ದು ನಿಜವೇ? ಅಥವಾ ಪವಾಡವಿರಬಹುದೇ ಎಂಬ ಶಂಕೆ ಮನಸ್ಸಿನಲ್ಲಿ ಮೂಡ ಬಹುದು. ಲಕ್ಕಮ್ಮನ ಸ್ವಾಮಿ ನಿಷ್ಠೆ ಭಕ್ತಿಗೆ ಮೆಚ್ಚಿ ಶಿವ ಆಕೆಯ ಅಡುಗೆಯಲ್ಲಿ ಅಕ್ಷಯತೆಯನ್ನು ಮಾಡಿದ್ದರೂ ಮಾಡಿರಬಹುದು! ಅದೇನೇ ಇದ್ದರೂ ಲಕ್ಕಮ್ಮನ ಅನುಭವದ ಅಕ್ಷತೆಯನ್ನು ವಿಶ್ವವೇ ಮೆಚ್ಚುವಂತಹದು. ಇಂದು ಮಾರಯ್ಯ-ಲಕ್ಕಮ್ಮರು ಕಾಲನ ಗರ್ಭದಲ್ಲಿ ಅಡಗಿ ಹೋಗಿರಬಹುದು. ಆದರೆ ಅವರು ಬಿಟ್ಟು ಹೋದ ಅನುಭವದ ಅಮೃತವಾಣಿ ಮಾತ್ರ ಮಾನವ ಜನಾಂಗ ಬದುಕಿರುವವರೆಗೆ ಜನಮನದಲ್ಲಿ ನೆಲೆಸಿರುವುದರಲ್ಲಿ ಸಂದೇಹವಿಲ್ಲ. ಇಂದಿನ ಪ್ರಪಂಚಕ್ಕೆ ಲಕ್ಕಮ್ಮನಂತವರು ಉದಯಿಸಿ ಬಂದರೆ ಪ್ರಪಂಚದ ಆರ್ಥಿಕ ಮುಗ್ಗಟ್ಟು ಸ್ವಲ್ಪ ಮಟ್ಟಿಗಾದರೂ ಕಡಿಮೆ ಆದೀತು.

### ೪) ಮಾದರ ಚೆನ್ನಯ್ಯ :

ಮಾದರ ಚೆನ್ನಯ್ಯನು ಶಿವಶರಣರಲ್ಲಿ ಅತ್ಯಂತ ಪ್ರಖ್ಯಾತನು ಬಸವಣ್ಣನವರೇ ಚೆನ್ನಯ್ಯನನ್ನು ಕುರಿತು "ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದೊಡೆಯೂ ಅಯ್ಯ ಎನಲಾರೆನಯ್ಯ,

ಚೆನ್ನಯ್ಯನೆಮ್ಮಯ್ಯನು ಚೆನ್ನಯ್ಯನ ಮಗ ನಾನು. ಚೆನ್ನಯ್ಯನ ಮನೆಯ ದಾಸನ ಮಗನಾನು" ಎಂದು ಮನಸಾರೆ ಹೊಗಳ ಬೇಕಾದರೆ ಚೆನ್ನಯ್ಯನ ಘನ ವ್ಯಕ್ತಿತ್ವದ ಅರಿವು ಪ್ರತಿಯೊಬ್ಬರಿಗೂ ಆಗುವುದರಲ್ಲಿ ಸಂದೇಹವಿಲ್ಲ.

ಚೆನ್ನಯ್ಯನು ಕಾಂಚೀ ಪಟ್ಟಣದಲ್ಲಿದ್ದಾಗ್ಗೆ ಕರಿಕಾಲ ಚೋಳನು ರಾಜ್ಯವಾಳುತ್ತಿದ್ದನು. ಚೆನ್ನಯ್ಯ ಕರಿಕಾಲ ಚೋಳನ ಅಶ್ವಾಲಯಕ್ಕೆ ಹುಲ್ಲು ಒದಗಿಸುವ ಕಾಯಕ ಕೈಕೊಂಡಿದ್ದ. ಈ ಕಾಯಕವನ್ನೇ ಜೀವನಾಧಾರವಾಗಿ ಮಾಡಿಕೊಂಡು ಇದರಲ್ಲೇ ಅಮರತ್ವವನ್ನು ಕಂಡವ. ಪ್ರತಿನಿತ್ಯ ಹುಲ್ಲನ್ನು ಕೊಯ್ದು ತಂದು ಕುದುರೆಯ ಲಾಯದಲ್ಲಿ ಹಾಕುವ ಕಾಯಕವನ್ನು ನಿಷ್ಠೆಯಿಂದ ಮಾಡಿ ಮನೆಗೆ ಬಂದ ಕೂಡಲೆ ಪತ್ನಿ ಮಾಡಿದ ಅಂಬಲಿಯನ್ನು ಶಿವನಿಗರ್ಪಿಸಿ ತಾನೂ ಸೇವಿಸುತ್ತಿದ್ದ. ಒಲುವಿನಿಂದ ಕೂಡಿ ಮಾಡಿದ ಅಂಬಲಿಯೇ ಅಮೃತವಾಯಿತು. ಚೆನ್ನಯ್ಯ ಅರ್ಪಿಸಿದ ಅಂಬಲಿಯನ್ನೇ ಪ್ರತಿದಿನ ಶಿವ ಸೇವಿಸುತ್ತಿದ್ದ. ಹೀಗೆ ಚೆನ್ನಯ್ಯನ ಗುಪ್ತ ಭಕ್ತಿ ಸಾಗಿತ್ತು. ಈತನ ಭಕ್ತಿ ಶಿವನಲ್ಲದೆ ಇನ್ನಾರಿಗೂ ಗೊತ್ತಿಲ್ಲ. ಎಲ್ಲರ ದೃಷ್ಟಿಯಲ್ಲಿ ಇವನೊಬ್ಬ ಕರಿಕಾಲ ಚೋಳನ ಕುದುರೆಗಳಿಗೆ ಹುಲ್ಲು ತಂದೊದಗಿಸುವ ಕೂಲಿಕಾರ. ಕುಲದಿಂದ ಮಾದರವನು, ವೃತ್ತಿಯಿಂದ ಕೂಲಿಕಾರ. ಶಿವನಿಗಿದು ಸೈರಿಸಲಾಗಲಿಲ್ಲ. ನೆಲದ ಮರೆಯ ನಿಧಾನದಂತಿದ್ದ ಈತನ ಗುಪ್ತ ಭಕ್ತಿಯನ್ನು ಸರ್ವರಿಗೂ ಪ್ರಕಟವಾಗುವಂತೆ ಮಾಡಬೇಕೆಂದು ಶಿವ ಮನಸ್ಸು ಮಾಡಿದ.

ಒಮ್ಮೆ ಚೆನ್ನಯ್ಯ ರಾತ್ರಿಯಲ್ಲಿ ಅಂಬಲಿ ಸುರಿಯು ತ್ತಿರುವಾಗ ಶಿವನು ಆತುರಪಟ್ಟು ಅದನ್ನು ಸುರಿದು ಸಂತೃಪ್ತ ನಾದನು. ಇತ್ತ ನಿತ್ಯದಂತೆ ರಾಜ ಕರಿಕಾಲ ಚೋಳ ಮುಂಜಾನೆಯ ಪೂಜೆಗಾಗಿ ದೇವಾಲಯಕ್ಕೆ ಬಂದು ಭಕ್ತಿಯಿಂದ ದೇವರ ಪೂಜೆ ಮಾಡಿ ತಂದ ಅಮೃತಾನ್ನವನ್ನು 'ಆರೋಗಿಸು ತಂದೆ' ಎಂದು ತೆರೆಯ ಹಿಂದೆ ನಿಂತನು. ಸ್ವಲ್ಪ ಹೊತ್ತು ತಡೆದು ಬಂದು ನೋಡುತ್ತಾನೆ. ಎಂದಿನಂತೆ ಶಿವನವುಗಳನ್ನು ಸೇವಿಸದೆ ಸುಮ್ಮನಿ ದ್ದಾನೆ. ಚೋಳ ರಾಜನಿಗೆ ಆಘಾತವಾಯಿತು. ಖಡ್ಗವನ್ನೆಳೆದು ಶಿರವನ್ನೇ ಕತ್ತರಿಸಿಕೊಳ್ಳಲು ಮೇಲೆತ್ತಿದಾಗ ಶಿವ ಪ್ರತ್ಯಕ್ಷನಾಗಿ ಸೈರಿಸು ಚೋಳ ಭೂಪಾಲ ಎಂದು ತಡೆದು, ಚೆನ್ನಯ್ಯನ ಅಂಬಲಿಯು ಬಹಳ ರುಚಿಯಾಗಿದ್ದರಿಂದ ಹೆಚ್ಚಿಗೆ ಸುರಿದು ಬಿಟ್ಟೆ. ಇಂದು ಹಸಿವೆ ಇಲ್ಲ. ನೀನು ಬೇರೆ ಭಾವಿಸಬೇಡ ಎಂದು ಸಂತೈಸಿದನು. ಚೆನ್ನಯ್ಯನ ಅಂಬಲಿ ಸವಿದ ಶಿವ ತನ್ನ ರಾಜಾನ್ನ ವನ್ನೂ ತಿರಸ್ಕರಿಸಿದ್ದನ್ನು ಕಂಡ ರಾಜ ಆಶ್ಚರ್ಯ ಚಕಿತನಾದನು. ತನ್ನ ರಾಜ್ಯದಲ್ಲಿ ಪರಮಾತ್ಮನೊಡನೆ ಉಂಡ ಮಹಾತ್ಮನ ದರ್ಶನ ಪಡೆಯಬೇಕೆಂದು ಹಾತೊರೆದು ಹೊರಟನು.

ಚೆನ್ನಯ್ಯನೆಂಬ ಶರಣನನ್ನು ಕಂಡಿರಾ ಎಂದು ಹಲುಬುತ್ತಾ ಕೇರಿಗೆ ಬರಲು ಅಲ್ಲಿ ಚೆನ್ನಯ್ಯನನ್ನು ಕಂಡ. ರಾಜ ನಮಸ್ಕರಿಸು ತ್ತಾನೆ. ಆಶ್ಚರ್ಯಪಟ್ಟ ಚೆನ್ನಯ್ಯನಿಗೆ ಅರಸು "ಪರಮಾತ್ಮನ ಕೃಪೆಗೆ ಪಾತ್ರನಾದವನೇ ದೊಡ್ಡವನು" ಎಂದು ನುಡಿದು ಚೆನ್ನಯ್ಯ ನನ್ನು ಪಟ್ಟದಾನೆಯ ಮೇಲೆ ಕುಳ್ಳಿರಿಸಿ ತಾನು ಕುದುರೆಯನ್ನೇರಿ ಹೋಗುವನು. ದೇವಸ್ಥಾನಕ್ಕೆ ಹೋದ ಚೆನ್ನಯ್ಯ ಶಿವಲಿಂಗ ದೆದುರು ನಿಂತು "ಪರಮಾತ್ಮನೇ ನಾನು ಯಾವ ಅಪರಾಧ

ಮಾಡಿದೆನು? ಚೋಳರಾಜನಿಂದ ನನ್ನನ್ನು ಹಿಡಿದು ತರ ಬೇಕಾಯಿತೆ, ನಾನು ಯಾವ ಪದವಿ ಬೇಡದೇ ಗುಪ್ತ ಭಕ್ತಿಯಿಂದ ಸುಖವಾಗಿದ್ದರೂ ನನ್ನನ್ನು ಇಂತಹ ವ್ಯಾಮೋಹಕ್ಕೆ ಬೀಳು ವಂತೆ ಮಾಡಿದೆ ಎನ್ನಲು ದೇವರು ಚೆನ್ನಯ್ಯನಲ್ಲಿ ಅಡಗಿದ್ದ ಗುಪ್ತ ಭಕ್ತಿಯನ್ನು ನೆರೆದ ಜನರೆದುರಿಗೆ ಪ್ರಕಟಿಸಿ ಅದೃಶ್ಯ ನಾದನು.

ಕರಿಕಾಲ ಚೋಳನ ಮೃಷ್ಟಾನ್ನ ಭೋಜನಕ್ಕಿಂತ ಮಾದಾರ ಚೆನ್ನಯ್ಯನ ಅಂಬಲಿಯ ಸವಿ ಶಿವನಿಗೆ ಹಿಡಿಸಬೇಕಾದರೆ ಆತನ ಭಕ್ತಿನಿಷ್ಠೆಯೇ ಇದಕ್ಕೆಲ್ಲ ಕಾರಣ. ಕೈಕೊಂಡ ಕಾಯಕ ನೋಡಿದರೆ ಹುಲ್ಲು ತಂದು ಹಾಕುವುದು. ಅಂತಹ ಸಣ್ಣ ಕಾಯಕದಿಂದಲೇ ಪರಮಾತ್ಮನನ್ನು ಆಕರ್ಷಿಸಿದ ಸುಂದರವಾದ ವಸ್ತುಗಳು ಕಂಡರೆ ಕೂಡಲೇ ಅವುಗಳನ್ನು ಮೊದಲು ಲಿಂಗಾರ್ಪಿತ ಮಾಡಿ ನಂತರ ತಾನು ಅನುಭೋಗಿಸುತ್ತಿದ್ದ ಮಾದಾರ ಚೆನ್ನಯ್ಯನ ಹೆಸರು ಶರಣ ಕುಲದಲ್ಲಿ ಅಮರವಾಗಿ ಉಳಿಯುವಂತಹದು.

### ೫) ಮೇದಾರ ಕೇತಯ್ಯ:

ಕಾಡಿಗೆ ಹೋಗಿ ಬಿದಿರುಗಳನ್ನು ಕಡಿದು ತರುವುದು ಅವು ಗಳಿಂದ ಬುಟ್ಟಿ, ಮರಗಳನ್ನು ಹೆಣೆದು, ಅವುಗಳನ್ನೇ ಮಾರಿ ಬಂದ ಹಣದಿಂದ ಜಂಗಮ ದಾಸೋಹ ಮಾಡುವುದೇ ಕೇತಯ್ಯನ ಸತ್ಯ ಶುದ್ಧ ಕಾಯಕವಾಗಿತ್ತು. ಈತನ ಕಾಯಕದಲ್ಲಿ ಸಹ ಭಾಗಿಯಾದವಳು ಸತ್ಯ ಸತಿ ಸಾತವ್ವ. ಪತಿಗೆ ತಕ್ಕ ಸತಿ. ಪತಿಗೆ ಕಾಯಕ ಮಾಡಿ ಬೇಸರವಿಲ್ಲ. ಸತಿಗೆ ಜಂಗಮ ದಾಸೋಹ ಮಾಡಿ ಬೇಸರವಿಲ್ಲ. "ಸತಿ ಪತಿಗಳಲ್ಲಿ ಒಂದಾದ ಭಕ್ತಿ. ಹಿತ

ವಪ್ಪುದಯ್ಯ" ಎನ್ನುವಂತೆ ಇವರ ಭಕ್ತಿ ಶಿವನಿಗೆ ಹಿಡಿಸಿತ್ತು. ಜೊತೆಗೆ ಇವರ ಕೀರ್ತಿ ಕಲ್ಯಾಣವನ್ನು ತುಂಬಿ ಹೊರಸೂಸ ತೊಡಗಿತು.

ಭಕ್ತರನ್ನು ಅರೆದು ನೋಡುವ, ಒರೆದು ನೋಡುವ ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ ಕೂಡಲ ಸಂಗಮದೇವ ಎಂಬ ಬಸವಣ್ಣನವರ ನುಡಿಯಂತೆ, ಮೇದಾರ ಕೇತಯ್ಯನ ಭಕ್ತಿ ನಿಷ್ಠೆಯ, ಕಾಯಕ ನಿಷ್ಠೆಯ ಪರೀಕ್ಷೆಗಾಗಿ ಶಿವ ಒಂದು ನಾಟಕವನ್ನೇ ನಟಿಸಬೇಕಾಯಿತು. ದಿನಂಪ್ರತಿಯಂತೆ ಕೇತಯ್ಯ ತನ್ನ ಕಾಯಕಕ್ಕೆ ಅಣಿಯಾಗಿ, ಕಾಡಿಗೆ ಹೋಗಿ ಬಿದಿರನ್ನು ಕಡಿಯಲು ಪ್ರಾರಂಭಿಸಿದಾಗ, ಯಾವ ಬಿದಿರನ್ನು ಕಡಿದರೂ ಅದರೊಳಗಿಂದ ಹೊನ್ನ ಸುರಿಯುವಂತೆ ಶಿವ ಪ್ರೇರೇಪಿಸುತ್ತಾನೆ. ಕಾಯಕದಿಂದ ಬರದ ಬಂಗಾರವು ಕಸವೆಂದು ಬಗೆದಿದ್ದ ಕೇತಯ್ಯ ಆ ಹೊನ್ನನ್ನು ಮುಟ್ಟುವುದಂತಿರಲಿ, ಆ ಹೊನ್ನು ಮುಟ್ಟಿದ ಬಿದಿರು ಸಹ ತನ್ನ ಕಾಯಕಕ್ಕೆ ಅಯೋಗ್ಯವೆಂದು ಬಗೆಯುತ್ತಾನೆ. ಆ ಬಿದಿರನ್ನು ಬಿಟ್ಟು ಬೇರೊಂದು ಬಿದಿರನ್ನು ಕಡಿಯುತ್ತಾನೆ. ಅಲ್ಲೂ ಹೊನ್ನು ಸುರಿಯುವುದು ನಿಲ್ಲಲಿಲ್ಲ. ಕೇತಯ್ಯನಿಗೆ ತನ್ನ ಕಾಯಕದಿಂದ ಬಂದ ಹಣದಿಂದ ಮಾಡಬೇಕಾದ ದಾಸೋಹ ಇಂದು ತಪ್ಪುವುದಲ್ಲ ಎಂದು ಕೊರಗಿ ಮರುಗಿ, ಶಿವನನ್ನೇ ಧ್ಯಾನಿಸುತ್ತಾ ನಿಂತಾಗ ಎದುರಿಗೊಂದು ಬಿದಿರು ಬೆಳೆದು ನಿಂತಿರುತ್ತದೆ.

ಎಲ್ಲಾ ಶಿವನಾಟ ಎಂದು ಹರ್ಷಗೊಂಡು ಕೇತಯ್ಯ ತನ್ನ ಕಸಬುಗತ್ತಿಯನ್ನು ಮಸೆದು, ನಡುವಿಗೆ ಬಿಗಿದು ಗಳವನ್ನೇರಿ ಕಡಿಯತೊಡಗಿದಾಗ ಕಾಲು ಜಾರಿ ಕೆಳಗೆ ಬೀಳುತ್ತಾನೆ. ಹರಿತ

ವಾದ ಕಸಬುಗತ್ತಿ ಎದಿಗೆ ನಟ್ಟು ರಕ್ತ ಚಿಮ್ಮಿ ಹರಿಯತೊಡಗಿತು. ಆದರೂ ಎದೆಗುಂದದೆ ಅಂದಿನ ದಾಸೋಹ ಮುಗಿಸದೆ ದೇಹವಿಡ ಲಾಗದೆಂದ ಧೀರ ಕೇತಯ್ಯ, ಪಶ್ಚಿಮಾಂಬುಧಿಯಲ್ಲಿ ಅಸ್ತಂಗತ ನಾಗುತ್ತಲಿದ್ದ ಸೂರ್ಯದೇವನಿಗೆ ತಡವಾಗಿ ಅಸ್ತಂಗತನಾಗಲು ಆಣೆ ಇಡುತ್ತಾನೆ. ಈತನ ಕಾಯಕ ನಿಷ್ಠೆಗೆ ಮೆಚ್ಚಿದ ಸೂರ್ಯ ದೇವನು ಅಸ್ತಂಗತನಾಗದೆ ಹಾಗೆ ಇರಬೇಕಾಯಿತು. ಕಡಿದ ಬಿದಿರನ್ನು ಹೊತ್ತುಕೊಂಡು ನೆತ್ತರು ಬಸಿಯುತ್ತಿದ್ದರೂ ಲೆಕ್ಕಿ ಸದೇ ಮನೆ ಮುಟ್ಟಿದ ಕೇತಯ್ಯ ಎಂದಿನಂತೆ ಬಿದಿರು ಕೆತ್ತಿ ಮೊರ ಹೆಣೆದು ಬೇಗ ಮಾರಿ ಬರಲು ಪತ್ನಿಯನ್ನೂ ಕಳಿಸಿ ಕೊಡು ತ್ತಾನೆ. ಪತಿಯ ಆಣತಿಯಂತೆ ಅವನ್ನೆಲ್ಲಾ ಮಾರಿ ಬಂದ ಹಣ ದಿಂದ ದಾಸೋಹ ನಡೆಸಿದಳು, ಸತಿ ಸಾತವ್ವ. ಆಮೇಲೆ ಹೆಂಡತಿಯನ್ನು ಕರೆದು ಎದೆಯಲ್ಲಿ ಮುರಿದಿದ್ದ ಅಲಗನ್ನು ಕೀಳೆಂದು ಹೇಳಿದ. ಪತಿಯ ಆಜ್ಞೆಯಂತೆ ಅಲಗನ್ನು ಕಿತ್ತಳು. ಇತ್ತ ಶಿವಯೋಗಿ ಕೇತಯ್ಯ ಮುಳುಗಿದನು. ಅತ್ತ ಆಗಸದ ರವಿಯೂ ಈತನ ಆಣೆಯಂತೆ ದಾಸೋಹ ತೀರಿದ ಕೂಡಲೆ ಅಸ್ತಂಗತನಾದನು.

ಈ ಘಟನೆ ಸಾತವ್ವನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಗುತ್ತದೆ. ರಾತ್ರಿಯೆಲ್ಲ ಪತಿಗಾಗಿ ರೋಧಿಸುತ್ತಾಳೆ. ಬೆಳಗಾಗುತ್ತಲೇ ಈ ಸುದ್ದಿ ಶರಣರ ಮನೆ ಮನೆಗೂ ತಲುಪುತ್ತದೆ. ಜಂಗಮ ಪ್ರಾಣಿ ಬಸವಣ್ಣನವರು ಈ ಸುದ್ದಿ ಕೇಳುತ್ತಲೇ ಪ್ರಾಣ ತ್ಯಜಿಸಿ ಬಿಡುತ್ತಾರೆ. ಶರಣ ಸಮೂಹವೆಲ್ಲಾ ಸೇರಿ ಶಿವನಲ್ಲಿ ಮೊರೆ ಹೋಗಲು ಪುನಃ ಇಬ್ಬರಿಗೂ ಜೀವ ಒದಗಿ ಬರುತ್ತವೆ. ಪ್ರಾಣದ ಹಂಗು ತೊರೆದು ಕಾಯಕದಲ್ಲೇ ತಲ್ಲೀನನಾಗಿದ್ದು ಬಿದಿರು ಕಡಿಯುವಾಗ ಹೊನ್ನು ಸುರಿದರೂ ಅದಕ್ಕೆ ಆಸೆ ಪಡದೆ

ಅದನ್ನು ಕಸವಾಗಿ ಕಂಡದ್ದು ಇವೆಲ್ಲವು ಮೇದಾರ ಕೇತಯ್ಯನ ಭವ್ಯ ವ್ಯಕ್ತಿತ್ವದ ಮಹಿಮೆಯನ್ನು ಸಾರಿ ಹೇಳುತ್ತವೆ.

### ೬) ಕಿನ್ನರಯ್ಯ–ಕಿನ್ನರಿ ಬಾರಿಸುವ ಕಾಯಕ

ಶಿವನ ಮುಂದೆ ಕಿನ್ನರ ವೀಣೆಯನ್ನು ಚಮತ್ಕೃತಿಯಿಂದ ನುಡಿಸುವುದೇ ಇವನ ಪ್ರತಿದಿನದ ಕಾಯಕವಾಗಿತ್ತು. ನಿಷ್ಠೆಯಿಂದ ಮಾಡುತ್ತಿದ್ದ ಕಿನ್ನರಯ್ಯನ ಕಾಯಕಕ್ಕೆ ಮನಸೋತ ಶಿವ, ಒಂದು ಹೊನ್ನು, ಒಂದು ಹಣವನ್ನು ನಿತ್ಯ ಪಡಿಯಾಗಿ ಕೊಡತೊಡಗಿದ. ಹೀಗೆಯೇ ಕಿನ್ನರಯ್ಯನ ಕಾಯಕ ಜೀವನ ಸಾಗಿರಲು ಒಂದು ದಿನ ವಿಟನೊಬ್ಬ ಪರ್ವಕ್ಕಾಗಿ ವೇಶ್ಯೆಯ ಮನೆಗೆ ಕುರಿಯನ್ನು ಕೊಂಡೊಯ್ಯುತ್ತಿದ್ದ. ಹರಕೆಯ ಕುರಿ ಕೊರಳ ನೇಣನ್ನು ಹರಿದು ದೇವಾಲಯದಲ್ಲಾದರೂ ಪ್ರಾಣ ಉಳಿದೀತೆಂದು ತ್ರಿಪುರಾಂತಕ ದೇಗುಲವನ್ನು ಪ್ರವೇಶಿಸುತ್ತದೆ. ಅದನ್ನು ಹಿಡಿದು ತರಲು ವಿಟ ದೇವಾಲಯಕ್ಕೆ ಹೋಗಲು ಅಲ್ಲಿಯೇ ಇದ್ದ ಕಿನ್ನರಯ್ಯ "ಮರೆ ಹೊಕ್ಕಿದ್ದನ್ನು ಕೊಡಲಾರೆ"ನೆಂದು ಹೇಳಿ ಅದಕ್ಕಾಗಿ ಸಾವಿರ ಹೊನ್ನನ್ನು ಕೊಟ್ಟು ಮೃತ್ಯುವಿನ ದವಡೆಯಿಂದ ಕುರಿಯನ್ನು ಪಾರುಮಾಡಿದರು.

ಉಕ್ಕುವ ಹರ್ಷದೊಂದಿಗೆ ವೇಶ್ಯೆಯ ಮನೆಗೆ ಹೋಗಿ ನಡೆದ ಸಂಗತಿ ತಿಳಿಸಿ, ಅವಳೆದುರು ಸಾವಿರ ಹೊನ್ನನ್ನು ಸುರಿಯುತ್ತಾನೆ. ನಿಜಸಂಗತಿ ತಿಳಿದ ವೇಶ್ಯೆ ವಿಟನನ್ನು ಧಿಕ್ಕರಿಸಿ ಅದೇ ಕುರಿಬೇಕೆಂದು ಹಟ ಹಿಡಿದಳು. ಬೇರೆ ದಾರಿ ಕಾಣದೆ ಪುನಃ ವಿಟ ಆ ಕುರಿಯನ್ನು ಹಿಡಿದು ತರಲು ತ್ರಿಪುರಾಂತಕ ದೇವಾಲಯಕ್ಕೆ ಬರಲು ಕಿನ್ನರಯ್ಯ ಅದಕ್ಕೆ ವಿರೋಧಿಸುತ್ತಾನೆ. ಕೊನೆಗೆ ಇಬ್ಬರಲ್ಲಿ ಜಗಳವಾಗಿ ಕಿನ್ನರಯ್ಯನ ಕೋಪಕ್ಕೆ ವಿಟ ಆಹುತಿ ಆಗುತ್ತಾನೆ.

ಈ ಸುದ್ದಿ ರಾಜನಲ್ಲಿಗೆ ಹೋಗಲು ಅರಸ ಬಸವಣ್ಣನವರನ್ನು ಕುರಿತು ನಿನ್ನ ಭಕ್ತರ ಉಪಟಳ ತಾಳಲಾರೆನೆನ್ನಲು, ನಿಜ ಸಂಗತಿ ತಿಳಿಯದೆ ಯಾವುದನ್ನು ಮಾತಾಡಬಾರದೆಂದು ತಿಳಿದು ಎಲ್ಲರೂ ದೇವಾಲಯಕ್ಕೆ ಹೋಗುತ್ತಾರೆ. ಅಲ್ಲಿ ಕಿನ್ನರಯ್ಯ ಎಲ್ಲರ ಸಮಕ್ಷಮ ತಮ್ಮಿಬ್ಬರ ಜಗಳಕ್ಕೆ ತ್ರಿಪುರಾಂತಕನನ್ನೇ ಸಾಕ್ಷಿ ನುಡಿಸುವೆ ಎಂದು ದೇವರನ್ನು ಓಗೊಡಲು, ತ್ರಿಪುರಾಂತಕನೇ ಪ್ರತ್ಯಕ್ಷನಾಗುತ್ತಾನೆ. ನೆರೆದ ಜನರೆಲ್ಲಾ ಕಿನ್ನರಯ್ಯನ ಭಕ್ತಿಯನ್ನು ಕೊಂಡಾಡಿ ತಮ್ಮ ತಪ್ಪಿಗಾಗಿ ಪಶ್ಚಾತ್ತಾಪಪಟ್ಟು ಅವನಲ್ಲಿ ಕ್ಷಮೆ ಕೇಳುತ್ತಾರೆ. ವೀಣೆ ನುಡಿಸುವ ಕಾಯಕವಾಗಿದ್ದರೂ ಅದನ್ನೇ ನಿಷ್ಠೆಯಿಂದ ಮಾಡಿ ದೇವರನ್ನು ಒಲಿಸಿಕೊಂಡ ಮಹಾತ್ಮನೀತ.

## ೭) ಕಲಕೇತ ಬೊಮ್ಮಯ್ಯ–ಭಕ್ತರ ಮನ ತಣಿಸುವ ಕಾಯಕ

ಕಲಕೇತ ಬೊಮ್ಮಯ್ಯನು ಹಾಸ್ಯಗಾರ ವೇಷವನ್ನು ಧರಿಸಿಕೊಂಡು ಭಕ್ತರ ಮನೆ ಮನೆಗೆ ಹೋಗಿ ಅವರನ್ನು ನಗಿಸಿ ತಣಿಸುವ ಕಾಯಕ ಇವನದಾಗಿತ್ತು. ಅದರಿಂದ ಬಂದ ಹಣದಿಂದಲೇ ಜಂಗಮಾರಾಧನೆ ಮಾಡುತ್ತ ತನ್ನ ಜೀವನವನ್ನು ಸಾಗಿಸಿಕೊಂಡು ಹೊರಟಿದ್ದ. ಭಕ್ತರ ಮನತಣಿಸುವುದು ಇದು ಒಂದು ಕಾಯಕವೇ. ಇದರಿಂದ ಜನರು ತಮ್ಮ ಸಂಸಾರ ತಾಪತ್ರಯಗಳನ್ನು ಕ್ಷಣಕಾಲ ಮರೆತು ಸಂತೋಷಪಡುತ್ತಿದ್ದರು. ಈ ಕಾಯಕವನ್ನು ತಪ್ಪದೇ ಮಾಡುತ್ತಿದ್ದ ಬೊಮ್ಮಯ್ಯ. ಹೀಗಿರುತ್ತಿರಲು ಒಮ್ಮೆ ಬಡ ಭಕ್ತನೊಬ್ಬ ಕಿನ್ನರಯ್ಯನನ್ನು ಕಂಡು ಅವನಿಂದ ಸ್ವಲ್ಪ ಹಣಪಡೆದು ತನ್ನ ಬಡತನವನ್ನು ನಿವಾರಿಸಿಕೊಳ್ಳ

ಬೇಕೆಂಬ ಆಸೆಯಿಂದ ಬರುತ್ತಾನೆ. ಬರುವಾಗ ಮಾರ್ಗ ಮಧ್ಯ ದಲ್ಲಿ ದಣಿವಾಗಿ ಕಲಕೇತ ಬೊಮ್ಮಯ್ಯನ ಮನೆಯ ಮುಂದೆ ದೊಪ್ಪನೆ ಬೀಳುತ್ತಾನೆ. ಬಡ ಭಕ್ತನನ್ನು ಉಪಚರಿಸಿದ ಕಲಕೇತ ಬೊಮ್ಮಯ್ಯ ಬಂದ ಕಾರಣ ಕೇಳಲು ಅವನು ತನ್ನ ಮನಸ್ಸಿನ ಇಚ್ಛೆಯನ್ನು ತಿಳಿಸುತ್ತಾನೆ. ಆಗ ಕಲಕೇತ ಬೊಮ್ಮಯ್ಯ ನಕ್ಕು "ಫಲಾಪೇಕ್ಷೆಯಿಂದ ಮಾಡುವ ಪೂಜೆ ಪೂಜೆಯೇ ಬೆಲೆಗೆ ಕೆಲಸ ಮಾಡುವವನ ಹೆಸರು ಹೇಳಬೇಡ" ಎನ್ನುತ್ತಾನೆ. ಹೀಗೆ ಹೇಳಲು ಕಾರಣ ಕಿನ್ನರಯ್ಯ ಪ್ರತಿದಿನ ವೀಣೆ ನುಡಿಸಿ ಶಿವನಿಂದ ಹಣವನ್ನು ಸಂಪಾದಿಸುತ್ತಾ ಹೊರಟಿರುತ್ತಾನೆ. ಇದುಕ ಲಕೇತ ಬೊಮ್ಮಯ್ಯನ ದೃಷ್ಟಿಯಲ್ಲಿ ಫಲಾಪೇಕ್ಷೆಯಿಂದ ಮಾಡುವ ಕಾಯಕವಾಗಿತ್ತು. ಕಾಯಕ ಮಾಡುವಲ್ಲಿ ಫಲಾಪೇಕ್ಷೆ ಇರಬಾರ ದೆಂಬುದೇ ಶರಣರ ಒಮ್ಮತವಾಗಿತ್ತು.

ಕಿನ್ನರಯ್ಯ ಕೊಡುವ ನಿಧಿಗಾಗಿ ಅಷ್ಟೊಂದು ದೂರ ಏಕೆ ಹೋಗುವೆ, ಇದೊ ತೆಗೆದುಕೋ ಎಂದು ಕಲ್ಲುಗಳನ್ನು ಬಡಿಗೆ ಯಿಂದ ಬಡಿಯಲು ಅದು ಹೊನ್ನುಗಳ ರಾಶಿಯಾಗಿ ಕಂಗೊಳಿಸಿತು. ಬಡತನ ನಿವಾರಿಸಿಕೊಳ್ಳಲು ಬಂದ ಬಡ ಭಕ್ತ ಆ ಹೊನ್ನಿನ ರಾಶಿ ಯನ್ನು ಕಂಡು ಅಮಿತಾನಂದದಿಂದ ತಾನೆತ್ತುವಷ್ಟನ್ನು ಹೊತ್ತು ಕೊಂಡು ಹೋಗಿ ಕಲಕೇತ ಬೊಮ್ಮಯ್ಯನ ವ್ಯಕ್ತಿತ್ವದ ಮಹಿಮೆ ಯನ್ನು ಬಸವಣ್ಣನಿಗೆ ತಿಳಿಸುತ್ತಾನೆ. ಇಂತಹ ಭಕ್ತರ ಉದಾತ್ತ ಚರಿತ್ರೆಯನ್ನು ಶಿವನೆ ಬಲ್ಲ ಎಂದು ಬಸವಣ್ಣನವರು ಕಲಿಕೇತ ಬೊಮ್ಮಯ್ಯನಲ್ಲಿಗೆ ಬರುತ್ತಾರೆ. ಅದೇ ಸಮಯಕ್ಕೆ ಕಿನ್ನರಯ್ಯ ನಿಗೂ ಈ ವಿಚಾರ ತಿಳಿದು ಆತನು ಬಂದು ಬೊಮ್ಮಯ್ಯನಲ್ಲಿ ಕ್ಷಮೆ ಕೇಳುತ್ತಾನೆ.

ಬೇಡಿ ಮಾಡುವುದು ಕೂಲಿ, ಅದು ಕಾಯಕವಲ್ಲ "ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ" ಎಂಬಂತೆ ಯಾವುದೇ ಕಾಯಕ ಮಾಡಿದರೂ ಅಲ್ಲಿ ಮಾಡಿದೆನೆಂಬ ಹಮ್ಮು ಇರಬಾರದು. ಜೊತೆಗೆ ಫಲಾಪೇಕ್ಷೆ ಇರಬಾರದು. ಯಾವುದನ್ನು ಬಯಸದೆ ನಿಷ್ಠೆಯಿಂದ ಮಾಡುವ ಕಾಯಕವೇ ಕಾಯಕ ಎಂಬ ಹಿರಿದಾದ ತತ್ವವನ್ನು ಕಿನ್ನರಯ್ಯನಿಗೂ ಹಾಗೂ ಇತರರಿಗೂ ತಿಳಿಸಿ, ತಾನೂ ಅದರಂತೆ ನಡೆದು ಕಾಯಕ ಯೋಗಿಯೆನಿಸಿ ಕಲ್ಯಾಣದಲ್ಲೇ ಈ ಇಹಲೋಕದ ಯಾತ್ರೆಯನ್ನು ಮುಗಿಸಿದ ಕಲಿಕೇತ ಬೊಮ್ಮಯ್ಯನ ಹೆಸರು ಶರಣರ ಪಂಕ್ತಿಯಲ್ಲೇ ವಿಶಿಷ್ಟವಾದುದಾಗಿದೆ.

## ೮) ಕುಂಬಾರ ಗುಂಡಯ್ಯ

ಜೀವನ ವೃತ್ತಿಯನ್ನೇ ಆಧ್ಯಾತ್ಮಿಕ ಮಾರ್ಗವೆಂದು ನಂಬಿಕೊಂಡವರಲ್ಲಿ ಕುಂಬಾರ ಗುಂಡಯ್ಯನು ಒಬ್ಬ. ಮಡಿಕೆ ಮಾಡುವುದೇ ಇವನ ದಿನ ನಿತ್ಯದ ಕಾಯಕವಾಗಿತ್ತು. "ಕಾಯಕವೇ ಶಿವಭಕ್ತಿ. ಕಾಯಕವೇ ಶಿವಭಜನೆ, ಕಾಯಕವೇ ಲಿಂಗ" ಎಂದು ನಂಬಿದ ಗುಂಡಯ್ಯನು ಶಿವನನ್ನು ಧ್ಯಾನಿಸಿದಂತೆಲ್ಲಾ ಮಡಿಕೆಗಳೆಲ್ಲ ತಮ್ಮಿಷ್ಟಕ್ಕೆ ತಾವೇ ತಯಾರಾಗುತ್ತಿದ್ದವು. ಎಂಬಂತೆ ತೋರುತ್ತಿತ್ತು. ಕಾಯಕದಲ್ಲೇ ಶಿವನನ್ನು ಒಲಿಸಿಕೊಂಡವ. ಶಿವನ ಸಂತೋಷವೇ ತನ್ನ ಸಂತೋಷವೆಂದು ನಂಬಿದ ಗುಂಡಯ್ಯ ರಾತ್ರಿಯೆಲ್ಲಾ ಕುಣಿಕುಣಿದು ತಾ ಮಾಡಿದ ಗಡಿಗೆಗಳನ್ನು ಬಾರಿಸುತ್ತಿದ್ದನು. ಗುಂಡಯ್ಯನ ಕಡೆ ಗಮನ ಹೊರಳಿದ ಶಿವನಿಗೆ ಕೈಲಾಸದಲ್ಲಿ ಮನಸ್ಸಿಲ್ಲದಾಯಿತು. ಇತ್ತ ಕುಂಬಾರ ಗುಂಡಯ್ಯ ಕುಣಿಯುತ್ತಿದ್ದಂತೆ

ಕೈಲಾಸದಲ್ಲೂ ಶಿವನ ಹೃದಯವು ಕುಣಿಯುತೊಡಗಿತು. ಕೊನೆಗೂ ತನ್ನ ನೆಚ್ಚಿನ ಭಕ್ತನಿಗೆ ದರ್ಶನ ಕೊಟ್ಟು ಅವನನ್ನು ಕೃತಾರ್ಥನನ್ನಾಗಿ ಮಾಡುತ್ತಾನೆ. ಹೀಗೆ ಗುಂಡಯ್ಯ ತನ್ನ ಜೀವನವನ್ನೇ ಆಧ್ಯಾತ್ಮಿಕವಾಗಿ ಮಾಡಿಕೊಂಡು ಅದರಲ್ಲೇ ಶಿವನನ್ನು ಕಂಡ ಶರಣನೀತ.

## ೫. ಉಪಸಂಹಾರ

ಯಂತ್ರಯುಗದ ಕೃತಕ ನಾಗರೀಕತೆ ವಿಶ್ವದಲ್ಲೇ ಅಶಾಂತಿಯ ಬಿರುಗಾಳಿಯನ್ನು ಎಬ್ಬಿಸಿರುವ ಈ ಸಂಧಿಕಾಲದಲ್ಲಿ ಶರಣರ ಜೀವನ ಸಂದೇಶ ನಮಗೆ ಶಾಂತಿಯ ತಂಗಾಳಿಯನ್ನು ಬೀಸಿ, ಜಗತ್ಕಲ್ಯಾಣ ಸೂಚಕವಾದ ಕೈಗಂಬದಂತೆ ನಿಂತಿವೆ. ಯುಗ ಯುಗಗಳು ಉರುಳಿದರು ಶರಣರ ಸಂದೇಶ ಆಚಂದ್ರಾರ್ಕವಾಗಿ ನಿಲ್ಲುವುದರಲ್ಲಿ ಸಂದೇಹವಿಲ್ಲ. "ಕಾಯಕವೇ ಕೈಲಾಸ"ವೆಂದು ೧೨ನೇ ಶತಮಾನದಲ್ಲಿ ಸಾರಿದ ಅಣ್ಣ ಬಸವಣ್ಣನವರ ಅಮರವಾಣಿ ಕಾಲ–ದೇಶಾದಿಗಳ ನಿರ್ಬಂಧವಿಲ್ಲದೆ ಎಲ್ಲಾ ಕಾಲದಲ್ಲಿಯೂ ಶಾಶ್ವತವಾಗಿ ನೆಲೆ ನಿಲ್ಲಬಲ್ಲ ಅದ್ವಿತೀಯ ತತ್ವವಾಗಿದೆ. ಇಂದು ಜಗತ್ತು ದಿನೇ ದಿನೇ ಹಲವಾರು ಜ್ವಲಂತ ಸಮಸ್ಯೆಗಳನ್ನು ಎದುರಿಸುತ್ತ ನಡೆದಿರುವ ಈ ಕಾಲದಲ್ಲಿಯಾದರೂ ಶರಣರ ಸಂದೇಶಗಳನ್ನು ಅನುಷ್ಠಾನಕ್ಕೆ ತಂದರೆ ಹಲವಾರು ಸಮಸ್ಯೆಗಳಾದರೂ ಬಗೆಹರಿದಾವು.

ಬಸವಣ್ಣನವರ ಕಾಲಕ್ಕೆ ನಿರುದ್ಯೋಗ ಸಮಸ್ಯೆಯೇ ಇರಲಿಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಕಾಯಕ ಮಾಡಿಕೊಂಡು ಜೀವನ ಸಾಗಿಸುತ್ತಿದ್ದರು. ದುಡಿಯುವವನಿಗೆ ಮಾತ್ರ ಉಣ್ಣುವ ಅಧಿಕಾರವಿದೆ ಎಂಬ ಸಿದ್ಧಾಂತವೂ ಶರಣರು ನಿರೂಪಿಸಿದ ಜೀವನ ಕ್ರಮದ ತಿರುಳಾಗಿತ್ತು. ಬದುಕಿಲ್ಲದೆ ಬದುಕಬಾರದು. ಕಾಯಕ ದೇವರಿಗಿಂತಲೂ ದೊಡ್ಡದು ಎಂಬ ಭಾವನೆ ಎಲ್ಲರ ಮನಸ್ಸಿನಲ್ಲಿ ಬೇರೂರಿತ್ತು. ಹೀಗಾಗಿ ಈ ಕಾಲಕ್ಕೆ ನಿರುದ್ಯೋಗ ಸಮಸ್ಯೆಯೇ ಇರಲಿಲ್ಲ. ಅಂತಹ ಭಾವನೆ ಈ ಕಾಲದಲ್ಲಿಯೂ ಎಲ್ಲರಲ್ಲೂ ಬರಬೇಕು. "ಕಾಯಕವೇ ಕೈಲಾಸ" ವೆಂಬ ಬಸವಣ್ಣನವರ ತತ್ವವನ್ನು ಅಕ್ಷರಶಃ ನಮ್ಮ ದೇಶಕ್ಕಿಂತ ಹೆಚ್ಚಾಗಿ ಪರದೇಶಗಳಲ್ಲಿ ಅನುಸರಿಸುತ್ತಿದ್ದಾರೆ. ಇಂದು ರಷ್ಯ, ಅಮೇರಿಕಾ, ಜರ್ಮನ್, ಜಪಾನ್ ಮುಂತಾದ ರಾಷ್ಟ್ರಗಳು ಮುಂದುವರಿಯಲು ಕಾರಣ ಆ ಜನತೆ ಕರ್ತವ್ಯವೇ ದೇವರೆಂದು ನಂಬಿ ನಡೆಯುವವರಾಗಿದ್ದಾರೆ. ಪ್ರಸಿದ್ಧ ತತ್ವ ಚಿಂತಕ ವಾಲ್ಟೇರ ೮೩ರ ತುಂಬು ಜೀವನದಲ್ಲಿ ಕಾಯಕವೇ ಸ್ವರ್ಗವೆಂದು ನಂಬಿ ನಡೆದುಕೊಂಡ ವಿಷಯವನ್ನು ನೆನೆದಾಗ ಆ ಜನರ ಕಾಯಕ ನಿಷ್ಠೆ ಎಂತಹದೆಂಬುದರ ಅರಿವಾಗುತ್ತದೆ. ಹೀಗಾಗಿ ಪರದೇಶಗಳಲ್ಲಿ ನಿರುದ್ಯೋಗ ಸಮಸ್ಯೆ ಆರ್ಥಿಕ ಸಮಸ್ಯೆಗಳು ಹೆಚ್ಚಾಗಿ ತಲೆದೋರುವುದಿಲ್ಲ.

ಈ ನಾಡಿನಲ್ಲೇ ಆಗಿ ಹೋದ ಬಸವಣ್ಣನವರ. ಶರಣರ ತತ್ವಗಳನ್ನು ನಾವು ಅಕ್ಷರಶಃ ಪಾಲಿಸಿದರೆ ಮುಂದುವರಿದ ರಾಷ್ಟ್ರಗಳ ಪಂಕ್ತಿಯಲ್ಲಿ ಸೇರಬಹುದಾಗಿತ್ತು. ಇನ್ನು ಆ ಕಾಲ ಬೇಗ ಒದಗಿ ಬರಬೇಕಾಗಿದೆ. "ಆಳಾಗಿ ದುಡಿಯಬಲ್ಲವನು ಅರಸಾಗ ಬಲ್ಲ" ಎಂಬ ಕನ್ನಡದ ಗಾದೆಯಂತೆ ನಮ್ಮ ದೇಶದಲ್ಲಿ

ಆಳಾಗ ಬಯಸುವವರು ಬಹಳ ಕಡಿಮೆ. ಅರಸಾಗ ಬಯಸುವವರೇ ಹೆಚ್ಚು. "ಈ ಜಗತ್ತಿನಲ್ಲಿ ಕರ್ಮವನ್ನು ಮಾಡುತ್ತಲೇ ನೂರು ವರ್ಷ ಬದುಕಲು ಆಶಿಸುವುದು ಉಚಿತ. ನಿನಗೆ ಇದೊಂದೆ ಮಾರ್ಗ. ಇದಲ್ಲದೆ ಬೇರೆ ಮಾರ್ಗವಿಲ್ಲ. ಕರ್ಮವು ಮನುಷ್ಯ ನಿಗೆ ಅಂಟುವುದಿಲ್ಲ" ಎಂಬ ಈಶೋಪನಿಷತ್ತಿನಲ್ಲಿ ಹೇಳಿರುವಂತೆ, ಕರ್ತವ್ಯವೇ ದೇವರೆಂದು ಭಾವಿಸಿ, ಕರ್ತವ್ಯದಲ್ಲಿ ನಿರತರಾಗಿ ಅದ ರಲ್ಲೇ ಕೈಲಾಸ ಕಂಡು ಈ ಲೋಕವನ್ನು ದೇವಲೋಕವನ್ನಾಗಿ ಮಾಡುವ ಹೊಣೆ ಪ್ರತಿಯೊಬ್ಬರದಾಗಿದೆ.

ನಾವು ಮಾಡಬೇಕಾದ ಕೆಲಸ ಎಷ್ಟೇ ಸಣ್ಣದಾದರೂ ಅದನ್ನು ಎಷ್ಟು ಸಾಧ್ಯವೋ ಅಷ್ಟು ಚೆನ್ನಾಗಿ ಮಾಡುವುದನ್ನು ಕಲಿಯಬೇಕು. ಅತ್ಯಂತ ಮುಖ್ಯವೆಂದು ನಾವು ಭಾವಿಸುವ ಕೆಲಸಗಳಿಗೆ ಕೊಡುವ ಗಮನ ಎಚ್ಚರಿಕೆಗಳನ್ನೇ ಸಣ್ಣ ಕೆಲಸಕ್ಕೂ ಕೊಡಬೇಕು. ನಮ್ಮ ಯೋಗ್ಯತೆಯ ನಿರ್ಣಯವಾಗುವುದು ಅಂಥ ಸಣ್ಣ ಕಾರ್ಯಗಳಿಂದಲೇ ಎಂಬ ಮಹಾತ್ಮ ಗಾಂಧೀಜಿ ಯವರ ಮಾತನ್ನು ಅರಿತುಕೊಳ್ಳಬೇಕು. ಕಾಯಕ ಚಿಕ್ಕದಿರಲಿ, ದೊಡ್ಡದಿರಲಿ ಎಲ್ಲದಕ್ಕೂ ಅಷ್ಟೇ ಮಹತ್ವ ಕೊಟ್ಟಾಗ ಮನುಷ್ಯನ ಯೋಗ್ಯತೆಯ ನಿರ್ಣಯವಾಗುವುದು. ಓರ್ವ ವ್ಯಕ್ತಿಯ ವ್ಯಕ್ತಿತ್ವ ಕಂಡು ಹಿಡಿಯುವುದು ಅವನ ಕಾಯಕ ನಿಷ್ಠೆಯ ಆಧಾರದ ಮೇಲೆ. ಕಾರಣ ಜನತೆ ಶರಣರ ಕಾಯಕ ತತ್ವವನ್ನು ಅನುಸರಿಸಿ ಅದರಂತೆ ನಡೆದರೆ, ವ್ಯಕ್ತಿಯ ಉದ್ಧಾರವಾಗಿ ದೇಶ ಸರ್ವಾಂಗೀಣ ಪ್ರಗತಿ ಹೊಂದುವುದರಲ್ಲಿ ಸಂದೇಹವಿಲ್ಲ.

ಮಾನವರಾಗಿಯೇ ಹುಟ್ಟಿ ಮಾನವರಾಗಿಯೇ ಬೆಳೆದು ನುಡಿದಂತೆ ನಡೆದು, ನಡೆದಂತೆ ನುಡಿದು ಹೋದ ಶರಣರ ಮಾರ್ಗ ನಮ್ಮೆಲ್ಲರಿಗೂ ಆದರ್ಶಪ್ರಾಯವಾಗಲಿ. ಅವರು ಹಾಕಿಕೊಟ್ಟ ಸುಮಾರ್ಗದಲ್ಲಿ ನಾವು ಮುಂದುವರಿಯೋಣ. ಅವರ ತತ್ವಗಳು ನಮ್ಮ ಜೀವನದ ಆಧಾರಸ್ತಂಭಗಳಾಗಿರಲಿ.

---

# ಆಧಾರ ಗ್ರಂಥಗಳು


೧. ಶರಣ ಚರಿತಾಮೃತ : ಶ್ರೀ ಸಿದ್ಧಯ್ಯ ಪುರಾಣಿಕ

೨. ಕರ್ನಾಟಕ ಸಂಸ್ಕೃತಿ ಸಮೀಕ್ಷೆ : ಡಾ. ಎಚ್. ತಿಪ್ಪೇರುದ್ರಸ್ವಾಮಿ

೩. ಬಸವ ತತ್ವದರ್ಶನ : ಸಂಪುಟ ೧, ಮಾತೆ ಮಹಾದೇವಿ

೪. ಕಾಯಕ ಕ್ರಾಂತಿ : ಡಾ. ಜ. ಚ. ನಿ.

೫. ವೀರಶೈವ ಸಂಸ್ಕೃತಿ : ಡಾ. ಎಚ್. ತಿಪ್ಪೇರುದ್ರಸ್ವಾಮಿ

೬. ಶ್ರೀ ಬಸವೇಶ್ವರರು : ಶ್ರೀ ಬಸವೇಶ್ವರರ ೮ನೇ ಶ. ಅಂಗವಾಗಿ ಸಂಪಾದಿಸಿದ ಗ್ರಂಥ

## ಉಪನ್ಯಾಸ ಗ್ರಂಥಮಾಲೆಯ
## ಇತ್ತೀಚಿನ ಪ್ರಕಟನೆಗಳು

**ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ**

೧ ಕಲ್ಯಾಣರಾಜ್ಯದ ಕಲ್ಪನೆ — ಆರ್. ವ್ಹಿ. ಹೊರಡಿ

೨ ಜೈನನೀತಿಶಾಸ್ತ್ರ — ಕಲ್ಯಾಣಪ್ರಸಾದ ಹನಗಂಡಿ

೩ ಪೋಲೀಸಿನವರು ಮತ್ತು ಸಾರ್ವಜನಿಕರು — ಎನ್. ನಾಗರಾಜರಾವ್

೪ ಅಭಿರುಚಿಗಳು — ಎ.ಎಸ್. ಧರಣೇಂದ್ರಯ್ಯ

೫ ಕಿತ್ತೂರಿನ ಇತಿಹಾಸ — ವ್ಹಿ. ಜಿ. ಮಾರಿಹಾಳ

೬ ಆರ್ಯ ಭಟ — ಎಂ. ಆರ್. ಹುಕ್ಕೇರಿ

೭ ಸರ್ವಜ್ಞನ ವೀರಶೈವಧರ್ಮ ದೃಷ್ಟಿ ಎ. ಎಸ್. ಹಿರೇಮಠ

೮ ಯಲಬುರ್ಗಿಯ ಸಿಂದರು —ಡಾ. ಬಿ. ವ್ಹಿ. ಶಿರೂರ

೯ ಶ್ರೀ ನಿಜಗುಣ ಶಿವಯೋಗಿಗಳ ಭಕ್ತಿ, ಜ್ಞಾನ, ವೈರಾಗ್ಯ — ಪಿ. ಎಂ. ಸಿದ್ಧಯ್ಯ

೧೦ ಧೂಮಪಾನ ಒಂದು ವಿಷಪಾನ — ಆರ್. ಸಿ. ಅಗಡಿ

**ಪ್ರಸಾರಾಂಗ ವಿಸ್ತರಣ-ಪ್ರಕಟನ ವಿಭಾಗ**
**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩**